ಪ್ರಕಾಶಕರು :
ಎಚ್. ಎಸ್. ದೊರೆಸ್ವಾಮಿ, ಬಿ. ಎಸ್ ಸಿ.,
ಮಿತ್ರ ಸಂಘ,
ಬೆಂಗಳೂರು ನಗರ

ಮೊದಲ ಮುದ್ರಣ: ೧೯೪೬



ಅಚ್ಚುಮಾಡಿದವರು:
ಆರ್ ಎನ್. ಹಬ್ಬು,
ಉಷಾ ಪ್ರೆಸ್, ನೀಲಗಿರಿ ರೋಡ್,
ಮೈಸೂರು

# ಅರಿಕೆ

' ಗಗನ ಚುಕ್ಕಿ ' ನನ್ನ ಎರಡನೆಯ ಕವನ ಸಂಕಲನ, ನಾಲ್ಕನೆಯ ಪದ್ಯ ಪುಸ್ತಕ. ೧೯೪೦ ರಲ್ಲಿ ಪ್ರಕಟವಾದ ' ರಾಗಿಣಿ 'ಯಲ್ಲಿ ಸೇರಿಸಲಾಗದೆ ಉಳಿಸಿಕೊಂಡಿದ್ದ ಆರೇಳು ಕವನಗಳನ್ನೂ ಅಲ್ಲಿಂದೀಚೆಗೆ ಬರೆದ ಹಲಕೆಲವು ಕವನಗಳನ್ನೂ ಸೇರಿಸಿ ಒಟ್ಟು ನಲವತ್ತುನಾಲ್ಕು, ಸಣ್ಣ ದೊಡ್ಡ ಕವನಗಳ ಒಂದು ಸಂಕಲನವಾಗಿ ' ಗಗನ ಚುಕ್ಕಿ ' ಯನ್ನು ಇದೀಗ ಪ್ರಕಟಿಸುತ್ತಿದೇನೆ. ಸಹೃದಯರೂ ರಸಿಕರೂ ಕಲಾಭಿಜ್ಞರೂ ಆದ ಕನ್ನಡಿಗರು ಈ ಸಂಕಲನ ವನ್ನೂ ಆದರ ಸಂತೋಷಗಳಿಂದ ಬರಮಾಡಿಕೊಳ್ಳುವರೆಂದು ನಂಬಿದೇನೆ.

' ಗಗನ ಚುಕ್ಕಿ ' ಯ ಎಲ್ಲ ಕೃತಿಗಳನ್ನೂ ಮೊದಲಿನಿಂದ ಕೊನೆಯ ವರೆಗೆ ಕ್ರಮವಾಗಿ ಓದುವ ಸಹಾನುಭೂತಿಯುಳ್ಳ ಸಹೃದಯರಿಗೆ ಈ ಕೃತಿ ಗಳನ್ನು ರಚಿಸಿದ ಕವಿಯ ಮನೋಧರ್ಮ ಎಂತಹದು ಎನ್ನುವುದರ ಅರಿ ವಾಗದೆ ಇರದು. ಇಲ್ಲಿ ಕುರಿತ ಕಾವ್ಯವಸ್ತುಗಳಾಗಲಿ, ಅವುಗಳ ನಿರೂಪಣೆಯ ರೀತಿಯಾಗಲಿ, ಆ ರೀತಿಯಲ್ಲಿ ತೋರಿಬರುವ ವ್ಯಂಗ್ಯಾರ್ಥವಾಗಲಿ, ರಸಭಾವ ಗಳಾಗಲಿ, ಉಕ್ತಿವೈಚಿತ್ರ್ಯ ಶಬ್ದಪ್ರಯೋಗಗಳಾಗಲಿ ಒಂದು ವಿಶಿಷ್ಟವಾದ ವ್ಯಕ್ತಿಸ್ವಭಾವವನ್ನೂ ಕವಿಮನೋಧರ್ಮವನ್ನೂ ಸೂಚಿಸುತ್ತದೆ ಎನ್ನುವುದು ಒಂದು ಓದಿಗೇ ಹೊಳೆಯುತ್ತದೆ.

ಆ ಮನೋಧರ್ಮದ ಒಂದು ಲಕ್ಷಣ ಅದರ ಸಾತ್ವಿಕತೆ. ರಾಜಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತೀವ್ರವಾಗಿ ವಿಪರೀತ ಸುಧಾರಣೆಗಳಾಗಬೇಕೆಂದು ಕೂಗಿಡುವ ಉಗ್ರಪಂಥಿಗಳ ವೀರ ಪುರೋಗಾಮಿ ತತ್ವದ ಪ್ರತಿಪಾದನೆ ಈ ಮನೋಧರ್ಮಕ್ಕೆ ಬಹುದೂರ. ದಾಸ್ಯ, ದಾರಿದ್ರ್ಯ, ಅಜ್ಞಾನಗಳಿಂದಾಗುವ ತುಮುಲ ವಿಪ್ಲವದ ಆರ್ತನಾದದ ಹುಯ್ಯಲು ಕೂಡ ಈ ಹೃದಯಪರಿಪಾಕಕ್ಕೆ ಬಾಹಿರ. ನಾಡಿನ ಮಕ್ಕಳನ್ನು ಬಡಿದು ಹೊಡೆ ದೆಬ್ಬಿಸುವ ರಣಕಹಳೆಯ ಆಘೋಷವೂ ಈ ಚೇತನಕ್ಕೆ ಹೊರತು. ಇಲ್ಲಿ ಕಾಣುವ ಮನೋಧರ್ಮ ಯಾವ ವಿಷಯದಲ್ಲಿಯಾಗಲಿ ಉದ್ವೇಗ ಆಕ್ರೋಶ

ಗಳಿಗೆ ಎಡೆಗೊಡದ ಸಮಾಧಾನ ಬುದ್ಧಿಗೆ ಸಮೀಪವರ್ತಿ. ಆರ್ಷೇಯ ವಾದುದರಲ್ಲಿಯೂ ಆರ್ಯರಾದವರಲ್ಲಿಯೂ ಗೌರವ ವಿಶ್ವಾಸಗಳನ್ನು ಪ್ರಕಟ ಪಡಿಸುವ ಶರಣಾಗತಿ ಈ ಚೇತನಕ್ಕೆ ಆಪ್ತವಾದುದು. ನೋವಾಗಲಿ ನಲಿವಾಗಲಿ ಪರಮಾತ್ಮನ ಕೃಪೆಯೆನ್ನುವ ಸಹನ ಶೀಲ ಈ ಹೃದಯಕ್ಕೆ ಅತಿ ಪ್ರಿಯವಾದುದು. ಅಂತೆಯೆ ಈ ಕೃತಿಗಳಲ್ಲಿ ಕ್ರಾಂತಿ, ಕ್ರೋಶ, ಕ್ಷೋಭೆ, ಉದ್ವೇಗ, ಉಪರೋಧಗಳನ್ನು ಉಳಿದು ಶಾಂತಿ, ತೋಷ, ನಲಿವು, ಸಮಾಧಾನ, ಒಲವುಗಳ ದಾರಿಯಲ್ಲಿ ಈ ಕವಿಮನೋಧರ್ಮ ಅಡಿಯಿಡುತ್ತಿರುವುದು ಕಾಣಬರುತ್ತದೆ. ಎಲ್ಲಿಯೂ ಅತಿಗೆ ಹೋಗದೆ ನಿಧಾನವಾಗಿ ಆದರೆ ನಿಸ್ಸಂಶಯವಾಗಿ ಬೆಳವಣಿಗೆಯನ್ನೂ ಏಳಿಗೆಯನ್ನೂ ಸಾಧಿಸುವ ಮಂದಗಾಮಿಯ ಮಧುರ ಮನೋಭಾವದ ಆವರಣದಲ್ಲಿ ಈ ಕೃತಿಗಳು ನಿರ್ಮಾಣಗೊಂಡಿವೆ. ಒಂದು ಮಾತಿನಲ್ಲಿ ಸೌವರ್ಣಮಧ್ಯಸ್ಥಿತಿಯ ಕವಿ ಮನೋಧರ್ಮ ಈ ಕೃತಿಗಳಲ್ಲಿ ಕಂಡುಬರುತ್ತದೆ ಎನ್ನಬಹುದು. 'ಗಗನ ಚುಕ್ಕಿ'ಯ ಕೃತಿಗಳನ್ನು ಸಹೃದಯರು ಈ ಒಂದು ಮನೋಧರ್ಮದ ತನಿವೆಳಗಿನಲ್ಲಿ ನೋಡುವುದು ಸಾಧುವೆಂದು ಸವಿನಯದಿಂದ ಸೂಚಿಸುತ್ತೇನೆ.

ಸುತ್ತಣ ಪ್ರಕೃತಿಯ ವಿಚಿತ್ರಗಳನ್ನೂ ನೆರೆಹೊರೆಯ ಜನಜೀವನದ ವ್ಯಾಪಾರಗಳನ್ನೂ ಕಂಡು, ಕೇಳಿದಾಗ ಅವುಗಳಲ್ಲಿ ನನಗೆ ಯಾವುದು ರಮ್ಯವಾಗಿ, ದಿವ್ಯವಾಗಿ, ಭವ್ಯವಾಗಿ ತೋರಿಬಂದಿತೋ ಅಂತಹವುಗಳನ್ನು ಮಾತ್ರ ಗುರುತಿಸಿ ಅನುಭವಿಸಿ ಆನಂದವಿವಶನಾಗಿ ನಲಿದಿದೇನೆ. ಆ ಅನುಭವ ಆ ಆನಂದಗಳನ್ನು ಶಬ್ದಾರ್ಥಗಳಿಂದೊಡಗೂಡಿದ ಲಯಗತಿಗಳನ್ನುಳ್ಳ ಹಿತಮಿತ ಮಧುರ ಪದಬಂಧಗಳ ಕೃತಿಯಾಗಿ ಹೊರಗೆಡಹಲು ಯತ್ನಿಸಿದೇನೆ. ಈ ಯತ್ನದಲ್ಲಿಯೂ ಆದಷ್ಟು ರಮ್ಯತೆಯನ್ನೂ ದಿವ್ಯತೆ ಭವ್ಯತೆಗಳನ್ನೂ ಗ್ರಹಿಸಿ ಸಂಗ್ರಹಿಸಿದೇನೆ. ಇಷ್ಟಾದರೂ ನನ್ನ ಅನುಭವಾನಂದದಲ್ಲಿ ಮೊದಲಿಗೆ ತೋರಿದ ಎಲ್ಲ ಪೂರ್ಣವಿವರಗಳೂ ಈ ಕೃತಿಗಳಲ್ಲಿ ಬಂದಿವೆ ಎಂದು ಹೇಳಲಾಗದು. ಅಲ್ಲಿ ಒಂದು ಭಾವ, ಇಲ್ಲಿ ಒಂದು ಬಣ್ಣ, ಇನ್ನೊಂದು ಕಡೆ ಒಂದು ಮಿಂಚು, ಒಂದು ನಯ, ಒಂದು ವಿಲಾಸ ಕಾಣೆಯಾಗಿದೆ; ಕೈ ಬಿಟ್ಟು ಹೋಗಿದೆ. ಈ ಕೃತಿಗಳನ್ನು ವಾಚಕರು ಸಹನೆ ಸಹಾನುಭೂತಿಗಳಿಂದ ಓದದೆ ಹೋದರೆ ಇವುಗಳಲ್ಲಿ

ಕಾಣಬರುವ ಅಲ್ಪ ಸ್ವಲ್ಪ ರಮಣೀಯತೆ ಭವ್ಯತೆಗಳೂ ಹೊಳೆಯದೆ ಹೋಗ ಬಹುದು.

ಈ ಕೃತಿಗಳಲ್ಲಿ ಕಾಣಿಸಿರುವ ಸಂಗತಿಗಳನ್ನೂ ಭಾವನೆಗಳನ್ನೂ ನಾನು ಮೊಟ್ಟಮೊದಲಿಗೆ ಅನುಭವಿಸಿದಾಗ ನನಗೆ ಅಮಿತವಾದ ಆನಂದವಾಯಿತು. ಅದೇ ಅನುಭವ ಕೃತಿಯಾಗಿ ಹೊಮ್ಮಿದಾಗ ಮತ್ತೆ ನಾನು ಆನಂದದಲ್ಲಿ ವಿವಶನಾದೆ. ಇಂತಹ ಆನಂದವನ್ನು ನನಗೆ ತಂದು ಕೊಟ್ಟ ಆ ಒಂದೆರಡು ಘಳಿಗೆಗಳೆ– ಆ ರಸನಿಮಿಷಗಳೆ– ನನ್ನ ಜೀವನದಲ್ಲಿನ ಅಮೃತಘಳಿಗೆಗಳು ಎಂದು ನಾನು ತಿಳಿದುಕೊಂಡಿದ್ದೇನೆ. ಈ ಕೃತಿಗಳ ವಾಚನದಿಂದ ಒಮ್ಮೆ ಯಾದರೂ ವಾಚಕರಿಗೆ ಆ ಆನಂದಾನುಭವವಾದರೆ ನಿಜವಾಗಿಯೂ ನಾನು ಕೃತಾರ್ಥನಾಗುತ್ತೇನೆ.

ಈ ಕೃತಿಯ ಪ್ರಕಟಣೆಯಲ್ಲಿ ನನ್ನ ಮಿತ್ರರಾದ ಶ್ರೀಮಾನ್ ಆರ್. ಎನ್. ಹಬ್ಬು ಅವರೂ ಶ್ರೀಮಾನ್ ಹೆಚ್. ಎಸ್. ದೊರೆಸ್ವಾಮಿ ಅವರೂ ನನಗೆ ತುಂಬ ಉಪಕಾರ ಮಾಡಿದ್ದಾರೆ. ಪುಸ್ತಕ ಪ್ರಕಟವಾಗಿ ಕನ್ನಡಿಗರ ಕೈಸೇರುತ್ತಿರುವ ಈ ಸಂತೋಷದ ಸಮಯದಲ್ಲಿ ಈ ಇಬ್ಬರು ಸನ್ಮಿತ್ರರಿಗೂ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸಿ ಕೈಮುಗಿಯುತ್ತೇನೆ.

ಜೂನ್ ೧೭, ೧೯೪೭
ಶಿವಮೊಗ್ಗ

ಎಸ್. ವಿ. ಪರಮೇಶ್ವರಭಟ್ಟ

# ಪರಿವಿಡಿ

# ಕವಿ

ವನವನವನಲೆದಲೆದು ಹಲವು ಹೂಗಳ ತಿರಿದು
ಮಾಲೆಗಟ್ಟುವ ರಸಿಕ ಹೂವಡಿಗನಂತೆ;
ಹೂವುಹೂವಿಗೆ ಹಾರಿ ಮಕರಂದವನು ಹೀರಿ
ಇನಿದಾದ ಮಧುವೀವ ಹೆಜ್ಜೇನಿನಂತೆ;
ಜಗದ ಜೀವರ ಚರಿತದನುಭವ ವಿಶೇಷಗಳ
ತಾನಾಯ್ದು ಜಾಣ್ಮೆಯಲಿ ಸವಿನುಡಿಯೊಳಿರಿಸಿ;
ಲೋಕಕೀವನು ಕವಿಯು ತನ್ನಮರ ಕಾವ್ಯವನು
ತಾ ನಲಿದ ಆನಂದದಾಕೃತಿಯ ಸಲಿಸಿ.

# ಒಲವು

ಒಂದು ಮಳೆಯೊಂದು ಬಿಸಿಲೊಂದಾಗಿ ದಿನವೊಂದು
ಹೋದಿಕೊಳುವಂದದಲಿ ಕಾದಿಗೆಯಲಿ;
ಸವಿಗನಸಿನೊಂದು ನಗೆಗೊಂದು ನಿಡಿದುಸಿರಿನಳು
ಬೆರೆತೊಲವು ಹೊಂದುವುದು ಕಾದಲರಲಿ.

# ನೀನು—ನಾನು

ಕೆಂಪಿನ ಬಣ್ಣದ ಹೂವನು ನೋಡಿ
ನಲಿದಾಡುವೆ ನೀನು.
ಹಳದಿಯ ಬಣ್ಣದ ಹಣ್ಣೆಲೆ ನೋಡಿ
ಹನಿಗೂಡುವೆ ನಾನು.

ಚಿನ್ನದ ಸುಂದರ ಕನಸಿಗೆ ಸೋತು
ಮರುಳಾಗುವೆ ನೀನು.
ನಿದ್ದೆಯನೋಡಿಸಿದರಿವಿಗೆ ಓತು
ಬೆರಗಾಗುವೆ ನಾನು.

ಹೂನಗೆಯುರಳುವ ಚೆಂದುಟಿ ಕಂಡು
ಮುದ್ದಾಡುವೆ ನೀನು.
ಕಂಬನಿಯುರುಳುವ ಕಣ್ಣನು ಕಂಡು
ಮೊಗವಿಳುಹುವೆ ನಾನು.

# ಪ್ರೇಮದ ಅಂತರ್ದೃಷ್ಟಿ

ನಿನ್ನ ಮನದಿಂದುಗುವ ಮಧುರ ಮೋಹನಗಾನ—
ಕಿಹುದು ಶೃತಿಯಾಗೆನ್ನ ಜೀವಮಾನ.
ನಿನ್ನ ಗುಣಕಥನವನು ಬಣ್ಣಿಸುವೊಡೆನ್ನೊಳಣಿ—
ಯಾಗಿಹುದು ರಸನೆಯಲಿ ದಿವ್ಯವಾಣಿ.
ನಿನ್ನ ಕಣ್ಣಿನೊಳಿರುವ ಪ್ರೇಮದಂತರ್ದೃಷ್ಟಿ—
ಗಿಹುದೆನ್ನ ಹೃದಯದಲಿ ಅರ್ಥಸೃಷ್ಟಿ.

## ಮೈಸೂರಿನಲ್ಲಿ ಒಂದು ಸಂಜೆ

ಕೆರಳುತ್ತಿದೆ ಭೂವಲಯುವ
ಪಡುಬಾನಿನ ಹುಚ್ಚು;
ಹೋಲುತ್ತಿದೆ ಲಯಕಾಲವ
ಕಡುಕತ್ತಲ ಕೆಚ್ಚು.
ಗಿರಿ ನೀಲಿಯು ಬಾನ್ನೀಲಿಯ
ನುಂಗುತಲಿಹುದಿರುಳು;
ಬಿರುಗಾಳಿಗೆ ತಲೆಗೆದರಿಹ
ಚೇಡಿಯು ಮುಂಗುರಳು
ಚಲಿಸುವುದೆನೆ, ಕರಿನೆರಳಿನ ಕೊನೆ
ಕವಿಯುತಲಿದೆ ಶಿರೆಗೆ,
ಕಾಳಿಮ ನಿಶಿಯೈತರುತಿರೆ
ಚಾಮುಂಡಿಯ ಗಿರಿಗೆ.
ನಗರದ ಕಿರಿ ದೀಪದ ಸಿರಿ
ನಡುಗುತಲಿಹುದಳುಕಿ.
ವಿದ್ಯುನ್ಮದವಡಗಿದೆ ತಮ—
ದಾಘಾತಕೆ ಸಿಲುಕಿ.

ಎಂದಿಗೆ ಗಗನಾಂಗಣ ಮಣಿ
ಚಂದಿರ ಮೇಲೇರಿ
ಸೊಬಗಿನ ಸೊದೆ ಸೂಸುತಲಿದೆ—
ಗಾನಂದವ ಬೀರಿ
ಅಡಗಿಸುವನೊ ಉಡುಗಿಸುವನೊ
ಕಾರಿರುಳನು ತುಳಿದು!

ಇನ್ನೆಂದಿಗೆ ಈ ಕಾಳಿಕೆ
ತೊಲಗುವುದೋ ಅಳಿದು
ಎನ್ನು ತಲೆದೆ ಕಾತರಿಸಿದೆ
ಬಗೆಗಾಗಿದೆ ಭ್ರಾಂತಿ.
ಚಂದ್ರೋದಯದಲ್ಲಿಯುವರ—
ಮಿನ್ನೆಲ್ಲಿಯ ಶಾಂತಿ.

# ತುಂಗೆಗೆ

ಮೆಲ್ದನಿಯ ಮಾತೇನೊ! ಬಿಳಿನೊರೆಯ ನಗೆಯೇನೊ!
ಬೆರಗು ಬಿಂಕಗಳಿಲ್ಲದಂತೆ ಹರಿಯುವುದೆನಿತು ಹಿತವೊ!
ನಡೆ ಸೌಮ್ಯವಾದರೂ ಚಟುವಟಿಕೆ ತೋರಿಹುದು.
ಆಳ ಹಿರಿದಾದರೂ ಒಡಲು ಶುಚಿಯಾಗಿಹುದು.
ಕೋಪವಿಲ್ಲದ ಶಕ್ತಿ ಪಾತ್ರವಿಾರದ ಯುಕ್ತಿ
ಒಂದಾಗಿ ನಿನ್ನ ಹಿರಿಮೆಗೆ ಅಂತೆ ಹೊಂದಿಕೊಂಡಿಹವು.
ಓ ತುಂಗೆ ಮಲೆನಾಡ ಗಂಗೆ ನೀ ಹರಿದೋಡು—
ಮಂದದಲಿ ಹರಿಸಲಾರೆಯ ಎನ್ನ ಜೀವನದ ತೊರೆಯ.

# ಸುರಹೊನ್ನೆ

ಗಗನಚುಂಬಿತ ಮಹಾರಣ್ಯಾದುತ್ತುಂಗ ಗಿರಿ—
ಪೀಠದಲಿ ಋಷಿಕನ್ಯೆ ಧ್ಯಾನದ ಸಮಾಧಿಯಲಿ
ನಿಶ್ಚಿಂತಳಾಗಿರುವೆ ಕೈವಲ್ಯ ಬೋಧಿಯಲಿ.
ಪಲ್ಲವಿತ ನವವಸಂತದ ಮಧುರ ಮಧುಲಹರಿ
ನಿನ್ನ ಮಂಗಳಮಹಾಮೂರ್ತಿಯ ಚಿರಂ ಮಿಸಿಸಿ
ಸಾಗುತಿಹುದನುದಿನಂ ನಿನ್ನ ಮೌನದ ತಪಸಿ—
ನಾರಾಧನೆಗೆ ಸಂದು. ನಿನ್ನ ಹಿರಿಗನಸಂತೆ
ತಳಿರ ನೀರಾಜನದಿ ಪಕ್ಷಿಗಳ ಕೂಜನದಿ
ಮರುತನಾಂದೋಳನದಿ ಪುಷ್ಪಸಂದೋಹಳದಿ
ಮೆರೆಯುತಿಹುದೋರಂತೆ ಉದಯಾಸ್ತಗಳ ಸಂತೆ.
ಈಶ್ವರ ಜಗತ್ತಿನ ಸುಚೇತನೋತ್ಸವೆ ಚೆನ್ನೆ!
ಸರ್ವಮಂಗಳೆ ಹೊನ್ನೆ ಸರ್ವಶುಭಸಂಪನ್ನೆ!
ನಿನ್ನ ಸಂದರ್ಶನದೆ ನಾನುಮಾನಂದಿಸಿದೆ—
ನಿಂದೆ ರಸಋಷಿಯಾದೆ ಮಧುರತರ ಮಧುವಾದೆ.

# ಬೈಗು ಭೈರವಿ

ಅಸ್ತಗಿರಿಯೊಳಿನನೆ ಬೀಳ್ವ
ಮಹಾಯಜ್ಞ ನಡೆದಿದೆ!
ಸುಡುವ ಮುಗಿಲಿನಿಂಧನವದೊ
ಅತಿ ಮನೋಜ್ಞವೆನಿಸಿದೆ!

ಅಹಹ! ವ್ಯೋಮವಿಳಿಯು ದಹಿಸ-
ಲರುಣ ದೀಪ್ತವಾಗಿದೆ!
ಓಹೊ! ದಿಗ್ದಿಗಂತದೆಡೆಗೆ
ಕಿರಣ ವ್ಯಾಪ್ತವಾಗಿದೆ!

ಅಗ್ನಿಕುಂಡದಂತೆ ಕ್ಷಿತಿಜ
ಭುಗಿಭುಗಿಲೆನೆ ಉರಿದಿದೆ!
ನಗ್ನ ವಿಸ್ಫುಲಿಂಗ ತೇಜ
ನಿಗಿ ನಿಗಿ ನಿಗಿ ಮೆರೆದಿದೆ!

ಮುಗಿಲಿನಂಚಿ ನುರಿ ಜ್ವಾಲೆ
ಅದೋ ಧಗಧಗಿಸುತ್ತಿದೆ!
ಹಚ್ಚಹಸುರು ಬನದ ಮಾಲೆ
ಬೆಂಕಿಗೆ ಗುರಿಯಾಗಿದೆ!

ಸಾಂದ್ರ ರುದ್ರ ತಮೋಧೂಮ
ವದೋಗಹಗಹಿಸುತ್ತಿದೆ.
ಪಡುವ ಕೋಡ ಮಹಾಸ್ತೋಮ
ದೊಡಲಿಗೆ ಢಗೆ ತಗುಲಿದೆ.

ಕಾಳಿ ಕರಾಳಿ ಬೈಗು ಭೈರವಿ
ನಮೋ ನಮೋ ಎನುತಿದೆ.
ಪ್ರೇತ ವನದ ರುದ್ರ ದೈವ
ತಾಂಡವ ಮಗ್ನವಾಗಿದೆ.

*   *   *

ಬೆಂದು ಬಿದ್ದನದೋ ರವಿ
ಗಿರಿಯ ಆಚೆ ಕಡೆಯಲಿ.
ಧ್ಯಾನ ದಗ್ಧನಾದ ಕವಿ
ಬೂದಿ ರಾಸಿಯಡಿಯಲಿ.

# ಮುತ್ತುಗದ ಮರ

ವೃಕ್ಷ ಭೈರವ ಕೆರಳಿ ರಕ್ತದೋಕುಳಿಯಾಡಿ
ಕುಂಕುಮ ವಿಲಿಪ್ತತನುಗಾತ್ರನಾಗಿರುವಂತೆ,
ಹಸಿದ ದಾವಾನಲಂ ಮರಮರಕೆ ಹಾರಾಡಿ
ತನ್ನ ಕೆನ್ನಾಲಿಗೆಯ ದೆಸೆದೆಸೆಗೆ ನೀಳ್ದಂತೆ,
ವನಕಾಳಿಯೋಲಗಕೆ ಕೆಂಜೊಡರ್ ಮಾಲೆಯಂ
ಪಿಡಿದೆತ್ತಿ ಪೊತ್ತಿಸಿದ ಕೆಂಪಿನಾರತಿಯವೋಲ್,
ಸರ್ವ ಸಂಗ ತ್ಯಾಗಿಯಾಗಿ ಕೆಂಗಾವಿಯಂ
ಸುತ್ತಿ ಉನ್ನತನಾಗಿ ನಿಂತ ಬೈರಾಗಿ ವೋಲ್,
ತನ್ನ ವಿಲಸತ್ಕಾಂತಿಯುತ್ಕರ್ಷದೋಜೆಯಲಿ
ಕಣ್ಣಿರಿವ ರಕ್ತಿಮ ವಿಭೂತಿ ಯಾಧಿಕ್ಯದಲಿ
ರುದ್ರ ರಮಣೀಯಮೆನೆ ಹೂತಿಹುದು ಮುತ್ತುಗಂ
ರಕ್ತಪುಷ್ಪಂ ಮುಡಿಯುತಾಪಾದ ಮಸ್ತಕಂ!
ಮೊತ್ತಮೊದಲ್ಬೈತಂದ ಚೈತ್ರಋತು ಹರಿಕಾರ!
ನಿನಗೆ ಸುಸ್ವಾಗತಂ ಶಂಕರ ಭಯಂಕರ!

## ಚೆಂಗುಲಾಬಿ

ಏನಿದೇನಿದೇನು ಮಾಟ
ನೋಡಲೆನಿತಿದಚ್ಚರಿ !
ಸೊಬಗೆ ಸೂರೆ ಹೋದ ಬೇಟ
ನೋಡಿದನಿತು ಅಚ್ಚರಿ !

ಅರುಣ ಮೂಡಿದೊಡನೆ ಮೂಡಿ
ಬಿಮ್ಮನೆ ಬಿರಿದರಳಿಹೆ.
ಕಿರಣ ಕಾಂತಿಯೊಡನೆ ಕೂಡಿ
ಕಮ್ಮನೆ ಮಘಮಘಿಸಿಹೆ.

ನೆಲದ ಸಾರ ಸತ್ವ ರಸವೆ
ಹೂವೊಳರಳಿ ನಿಂದುದೆ.
ಒಲುಮೆವೆರೆದ ಚೆಲುವೆ ಬಿರಿದ
ಕೆಂಪು ಕುಸುಮವಾದುದೆ.

ಕಣ್ಣಿಗಿನಿದು ಮುಟ್ಟಲು ಮೃದು
ಅಹಹ ಏಂ ಸುವಾಸನೆ.
ಪುಳಕಗೊಂಡ ಕೆಂಪು ಮೈ
ಮಂದಹಾಸದಾನನೆ.

ದುಂಬಿ ಹಾಡಿ ತಾನೆ ಆಡಿ
ಒಲಿವುದನೆ ಕಾದಿಹೆ.
ಮಧುರ ಮಧುವನೊಲಿದು ನೀಡಿ
ನಲಿವುದನೆ ನೋಂತಿಹೆ.

ಭೃಂಗರಾಜ ಸಂಗ ಸುಖಿಯೆ
ನೀನೆ ಧನ್ಯೆ ಧರೆಯಲಿ
ಮಧುರ ಹೃದಯೆ ಹಸನ್ಮುಖಿಯೆ
ನಿನ್ನನೆಂತು ಮರೆಯಲಿ.

# ಫಾಲ್ಗುಣದ ಕೊನೆಯ ರಾತ್ರಿ

ಶಿಶಿರ ಋತು ವಿಪರ್ಯಯ ಪರ್ವಕಾಲದೊಳಂದಿ–
ನಿರುಳ ದುರ್ದಮನೀಯ ಯಾತನೆಗೆ ರವಿ ಬೆದರಿ
ಮೈಗರೆದು ಮರೆಯಾಗೆ ಪಶ್ಚಿಮಾದ್ರಿಯನಡರಿ;
ಹಾಡನೋದದೆ ಕವಿ ಮಲಗಿದಂ ಮನಂಗುಂದಿ.
ಫಾಲ್ಗುಣದ ಕೊನೆಯಿರುಳ್ ನೆಲೆಯನೊಂದಂ ಅರಸಿ
ಚಾಮುಂಡಿಗಿರಿಯನಿರದಪ್ಪಿಕೊಳೆ ಸಡಗರಿಸಿ;
ಛಳಿಗೆ ಗಿರಿ ನಡುಗಲಿರುಳುರುಳಿದುದು ತಪ್ಪಲಿಗೆ.
ಒಡನೆ ಅಸು ಹಾರಿದುದು ಉಳಿದುದು ಕಳೇಬರಂ.
ಫಾಲ್ಗುಣದ ಸಾವುಗಂಡಂತೆ ಬಾನುಬರಂ
ಮನೆ ಬೀದಿ ಗಿರಿ ಗುಡಿಲು ಬಯಲು ತಪ್ಪಲಿನ ಕೆರೆ
ಎಲ್ಲಮಂ ಹಿಮ ಸಮಾಧಿಯೊಳದ್ದಿ ಸೆಡೆತ ತೆರೆ
ಹನಿಗೂಡಿ ಚೆಂತಿಸಿರೆ; ಫಾಲ್ಗುಣ ಕಳೇಬರಕೆ
ರವಿ ಬಂದು ಮಾಡಿದಂ ಚರಮ ಸಂಸ್ಕಾರಮಂ.
ಕವಿ ನಿಂದು ಹಾಡಿದಂ ಚರಮ ಸುಶ್ಲೋಕಮಂ.

# ಹೇಮಂತ

ಹೇಮಂತ ಋತುರಾಜನಿಳೆಗೆ ಬಂದಿಳಿವಂದು
ಹೂವಿಲ್ಲ ಹಸುರಿಲ್ಲ ಚಿಗುರೆಲೆಗಳಿಲ್ಲ.
ದುಂಬಿಗಳ ದನಿಯಿಲ್ಲ ಹಕ್ಕಿಗಳ ಹಾಡಿಲ್ಲ
ಕುಸುಮ ಗಂಧವ ತರುವ ಮರುತನಿಲ್ಲ.

ಚೆಂಗುಡಿಯ ಸಿಂಗರದ ವರ ವರೂಥಗಳೆನಿಸಿ
ಮೆರೆವ ಮರಗಿಡ ಬಳ್ಳಿ ಬರಿದೆ ಮೊಗವಿಳುಹಿ
ಮೌನದಲಿ ವ್ಯೆದೆಗೆದು ಮನಮುರಿದು ನಿಂದಿಹವು
ಭಾಗ್ಯ ಹೀನರವೋಲು ದೀನರೆಂದೆನಿಸಿ.

ಮಂಜು ಮುಸುಕನು ಹೊದ್ದು ಹೊಲಗದ್ದೆಗಳು ಮಲಗಿ
ಸುಯ್ಯೆಲರ ಸೂಸುತಿವೆ ನಿನ್ನ ಹಳಿದು
ಮೆಲ್ಲಮೆಲ್ಲನೆ ಸರಿದು ಮೊಗದ ಜವನಿಕೆಯೆಳೆದು
ತುಂಗೆ ತೊರೆ ಹರಿಯುತಿದೆ ನಡುಗಿ ವ್ಯೆನೆನೆದು.

ಹಣ್ಣೆಲೆಗಳುದುರುತಿಹ ಬರಲು ಮರಗಳನೇರಿ
ಕಣ್ಣೀರು ಸುರಿಸುತಿದೆ ಕಾನನದ ಹಕ್ಕಿ.
ತಣ್ಣನೆಯ ಗಾಳಿಯಲಿ ಹಿಮದೊಂದು ಸೋನೆಯಲಿ
ಮಿಣ್ಣನಿದೆ ಮಾನವನ ಜೀವ ಸೆರೆ ಸಿಕ್ಕಿ.

ಎತ್ತಲುಂ ಬಿಳಿಮಂಜು ಎತ್ತಲುಂ ಹಿಮಗಾಳಿ
ಎತ್ತಲುಂ ನಡುಗುತಿಹ ನೀರವಾಲೋಕ!
ಎತ್ತಲುಂ ಬರಡುಬನವೆತ್ತಲುಂ ಜಡದ ಜನ
ಎತ್ತಲುಂ ಶೂನ್ಯ ಮನಮರುಗುತಿಹ ಮರುಕ.

ಹೇಮಂತನಾಳಿಕೆಯ ಕಠಿಣ ಶಾಸನವಿಂತು
ಅದಕೆ ತಲೆವಾಗುವುದೆ ಸೃಷ್ಟಿಯೊಳಮರ್ಮ.
ಒಂದೊಂದು ಋತುವಿನಲಿ ಒಂದೊಂದು ರೀತಿಯಲಿ
ಸಂಸ್ಕಾರ ಪಡೆಯುವುದೆ ಜೀವಗಳ ಧರ್ಮ.

## ಬೇಸಗೆಯಲ್ಲಿ ತುಂಗಾ ದರ್ಶನ

ನಿನ್ನ ನಡೆ ಏನಂದ ಪಾತ್ರವೆನಿತಾನಂದ
ತೀರವು ಮರವುಗಳಿರವದೇನು ಚಂದ!
ಮೆಲುನಡೆಯ ಸವಿಯಲಿಯನೊರೆ ನಗೆಯದೆನಿತಂದ
ಗುಳುಗುಳನೆ ಸುಳಿಯುತಿರಲೆನಿತು ಸೊಗಸು!

ನೊರಜುಗಲ್ಗಳ ಜಳಕ ಚಲ್ಲಾಟದೊಡವೆರೆದ
ಬುರಗು ನೀರ್ಗುಳ್ಳೆಗಳೆದೆನಿತು ಚಂದ!
ಮಿರುಗುತಿಹ ಕನ್ನಡಿವೊಲಿರುವ ನೀರಿನೊಳಿಲ್ಲಿ
ಚರಿಸುತಿಹ ಜಲಚರಗಳೆನಿತು ಸೊಗಸು!

ಎಡಬಲದ ದಡಗಳಲಿ ಹಚ್ಚ ಹಸುರಿನ ಬಯಲು
ನಡುವೆ ಮಳಲೊಟ್ಟನಲಿ ಬಂಡೆಸಾಲು.
ನಿನಗೆ ಕೊಡೆ ಹಿಡಿವೊಂದು ಸಂಭ್ರಮವಿದೆನುವಂತೆ
ಮಾವು ನೇರಿಳೆ ಹೊಂಗೆ ಮರದ ನೆರಳು.

ಅಲ್ಲೆ ಬಯಲಿನೊಳಾಚೆ ಮೇಯುತಿದೆ ತುರು ಮಂದೆ
ಗೊಲ್ಲನಿರುವನು ಬಳಿಯೆ ಮರದ ಕೆಳಗೆ.
ಜಾನಪದ ಗೀತಗಳ ನುಡಿಸುವನು ಕೊಳಲಿನಲಿ
ಕರೆದು ತುರು ಮಂದೆಯನು ನೀರ ಬಳಿಗೆ.

ನಿನ್ನ ಶೀತಳವಾರಿ ಸೇಚನಾನಂದದಲಿ
ನರ್ತಿಸುತೆ ನಲಿಯುತಿದೆ ನೀರುಹಕ್ಕಿ.
ವನ್ಯಮೃಗ ಪಕ್ಷಿಗಳು ನಿನ್ನ ನೀರಾಸರೆಯೊ-
ಳರ್ತಿಯಿಂದಾಡುತಿವೆ ಹರುಷವುಕ್ಕಿ.

ನಿನ್ನ ತೀರ್ಥೋದಕದೊಳಾನಂದದಿಂ ಮಿಂದು
ತನುಮನೋಬುದ್ಧಿಗಳ ಬೆಳಗಿ ತೊಳಗಿ
ನಿನ್ನ ತೆರೆಗೈಗಳಾಶೀರ್ವಾದಗಳನಾಂತು
ಧನ್ಯರೆನಿಸಿಹರೆಲ್ಲ ಊರ ಮಂದಿ.

ದೇವಿ ತುಂಗಾ ಮಾತೆ ಭಾವುಕರ ಸಂಪ್ರೀತೆ
ದಿವ್ಯ ಸುಂದರ ಗಾತ್ರೆ ಸಹ್ಯ ತೀರ್ಥೆ!
ಹಿರಿಮೆಯುಲಿ ಹೆಸರಾದ ಕಾರಣಿಕ ಕ್ಷೇತ್ರಗಳ
ವಿರಚಿಸಿಹ ಸತ್ಪಾತ್ರೆ ವರಚರಿತ್ರೆ!

ಹುಲ್ಲು ಗಿಡ ಮರಬಳ್ಳಿ ಮೃಗಪಕ್ಷಿ ಕೀಟಗಳ
ಸಜ್ಜನರ ದುರ್ಜನರನಖಿಲ ಜಗವ
ನಿನ್ನ ಮಡಿಲೊಳಗೋವಿ ಒಂದೆ ಭಾವದಿ ನೋಡಿ
ರಕ್ಷಿಸುವೆ ಪ್ರೇಮಪೀಯೂಷವೂಡಿ.

ನಿನ್ನ ದರ್ಶನದಿಂದೆ ಧನ್ಯನಾಗಿಹೆನಿಂದು
ಸುಮನಸೆಯೆ ತಾಪಸೆಯೆ ದಿವಿಜನದಿಯೆ.
ಅಡಿಯಿಂದ ಮುಡಿವರೆಗೆ ಮಿಂದು ಮಡಿಯಾಗಿರುವೆ,
ಹೆಂದದಾನಂದದಲಿ ಹೊರೆಯೇರಿಹೆ.

ತೆರೆತೆರೆಗಳನೆ ರಚಿಸಿ ಭಾವ ಗಂಗಾಲಹರಿ
ಹರಿದುದೆನೆ ಉಕ್ಕುತಿರೆ ಹರುಷಹೊನಲು
ಹಾಡುತಿಹೆನೋ ತುಂಗೆ ಸಹ್ಯ ತೀರ್ಥತರಂಗೆ
ಹರಸು ಓ ತಾಯೆ ಮಲೆನಾಡ ಗಂಗೆ.

# ಜ್ಯೇಷ್ಠದಲ್ಲಿ

ಶೃಂಗಗಿರಿ ಕೋಮಲ ಲಲಾಟ ಪ್ರದೇಶದಲಿ
ಮಲೆತು ಮುಸುರಿದ ಮಹಾ ಜೀಮೂತ ಪಂಕ್ತಿಯಲಿ
ಕಾರ್ಗಾಲದಪಯಶಸ್ತೋಮ ಸಂಕ್ಷೋಭೆಯಂ
ಧೂಮ್ರವರ್ಣಾವರಣ ಜನಿತ ನಿಸ್ತೇಜಮಂ
ಜೇಷ್ಠದುರ್ದಿನದುದಯ ಮೆತ್ತುತಿಹುದೆಂಬಂತೆ
ನಿಬಿಡ ಕೃಷ್ಣಚ್ಛಾಯೆ ಬಲಿಯುತಿಹುದೋರಂತೆ.
ಮೇಣಂತೆ ಮೊಗಚಾಚಿ ಶೈಲಶಿಶು ಸಮುದಯಂ
ಮುಗಿಲಮಾರಿಯ ಮೊಲೆಯ ನುಣುವಂತೆ ತೋರುತಿದೆ.
ವರ್ಷಧಾರೋತ್ಕರ್ಷ ವಿಪ್ಲವ ವಿನೋದಕ್ಕೆ
ಗಿರಿ ಹೊನಲು ಪುರ ವೀಧಿ ಗುಡಿ ಗೋಪುರಂ ಸಿಲ್ಕೆ
ಎವೆ ಮುಚ್ಚಿ ಬಿಡುವಲ್ಲಿ ವರ್ಷದುತ್ಕ್ರಾಂತಿಯಲಿ
ಮುಳುಗುವೀ ಶೃಂಗಗಿರಿ ತನ್ನಂತ್ಯವನು ತಾನೆ
ಮನಗಂಡ ತಾರ್ಕಿಕನ ಆತ್ಮಸುಸ್ಥಿರತೆಯನೆ
ಮೆರೆವಂತೆ ತೋರುತಿದೆ ಮಹಾಯೋಗಿ ವರನಂತೆ

# ಕವಿಗೆ

ಏನು ಕವಿಯೇ ಏನು ಮೌನದಿಂದೇಕಾಂಗಿ
ಯಾಗಿಲ್ಲಿ ಚಿಂತಿಸುತೆ ಬರಿದೆ ನೀಂ ಕುಳಿತೆ.
ಭಾವಚಿಂತಾರತ್ನವಾವುದರ ಶೋಧನೆಯೊ—
ಳಿಲ್ಲಿ ನೀಂ ಧ್ಯಾನಸ್ಥನಾಗಿ ಮೈಮರೆತೆ.

ವಿಶ್ವಕವಿನಿರ್ಮಿಸಿದ ಲೋಕಮೋಹಕಮಾದ
ಸೌಂದರ್ಯವಾವುದನು ನೋಡಿ ನೀಂ ನಲಿವೆ.
ಮೇಣಾವ ರಸ ತೀರ್ಥದಲಿ ಮಿಂದು ಪೂತಾತ್ಮ—
ನೆನಿಸಿ ನೀಂ ರಸಋಷಿಯವೋಲಿಲ್ಲಿ ಮೆರೆವೆ.

ಆವ ಸಂಶೋಧನೆಯ ಶಾಸ್ತ್ರರೋಹಣಗಿರಿಯ—
ನಾರೋಹಣಂಗೈದು ಏನ ನೀಂ ಪಡೆದೆ.
ಆವ ತತ್ವಾಲೋಕದಾನಂದದಾಗರದೆ
ಆತ್ಮಕಲ್ಯಾಣವನು ಸಾಧಿಸುತೆ ಮೆರೆದೆ.

ಸುಂದರ ಸರೋವರಗಳರವಿಂದ ಗಂಧದಲಿ
ನಲಿದೊಲಿದು ಮೀಯುತ್ತ ಜಲಕೇಳಿಯಾಡಿ
ರತಿಯೊಂದು ಮೈವೊಗರನೇಳಿಸುವ ಚೆಲುವಿನಲಿ
ಮೆರೆದಂಥ ರಮಣಿಯರ ಹಾಡಿ ನೀಂ ನಲಿದೆ.

ಅಕ್ಷಯ್ಯ ಸುಖವಿರುವ ಯಕ್ಷಲೋಕದೊಳಲ್ಲಿ
ಕಲ್ಪತರುವಿಂದೊಗೆದ ಮಧುರ ಮಧು ಕುಡಿದು
ಕುಣಿದಾಡುತಿರುವಂಥ ಭೋಗೋಪಜೀವಿಗಳ-
ನಾಯಕ್ಷ ಯಕ್ಷಿಣಿಯರಂ ಕಂಡು ನಲಿದೆ.

ದೇವೇಂದ್ರ ಸಭೆಯಲ್ಲಿ ನಡೆದ ನೃತ್ಯೋತ್ಸವವ
ತುಂಬುರರ ಕಿನ್ನರರ ಗಾನದಿಂಚರವ
ಹಾಡಿ ವೈಮರೆಯಿಸಿದೆ ಹೊಗಳಿ ಮನವುಬ್ಬಿಸಿದೆ
ಆದರಂಥ ಇನ್ನಿತರ ಸೌಂದರ್ಯದಿರವ.

ಭಕ್ಷ್ಯಭೋಜ್ಯಗಳೇನು ಲೇಹ್ಯಖಾದ್ಯಗಳೇನು
ಭೂರಿಸಂತರ್ಪಣೆಯು ಬ್ರಹ್ಮಪಂಕ್ತಿ
ಭೂತಳೇಶನ ಮಗಳ ಆ ಸ್ವಯಂವರದಲ್ಲಿ
ನಡೆದಮೃತದೂಟವನು ಬಣ್ಣಿಸಿದೆ ದಣಿದೆ.

ಏಳು ಕವಿಯೇ ಏಳು ಮೌನವನು ಒಡೆದೇಳು
ಭಾವಚಿಂತಾರತ್ನವದನು ಹೊಳು.
ಒಂಟಿಯಾಗಿರಬೇಡ ನನ್ನೊಡನೆ ನಡೆದುಬಾ
ನೋಡೀಪ್ರಪಂಚವನು ಏನೆಂಥ ಬಾಳು!

ಕಣ್ಣೀರ ಮಳೆಸುರಿಸು ಸುಯ್ಯಲರನುರೆಸೂಸು
ಎದೆತೆರೆದು ಕನಿಕರಿಸಿ ಈ ಜಗವ ನೋಡು.
ಮಾನವರ ಬಾಳೆಂತು ಹಾಳಾಗಿ ಹೊಲಸಾಗಿ
ನಾರುತಿಹುದೆಂಬುದನು ನೋಡಿ ನೀಂ ಹಾಡು.

ಜೀರ್ಣದೇಹವನೊಂದು ಜೀರ್ಣವಸನದಿ ಮುಚ್ಚಿ
ಪೂರ್ಣ ನಮ್ರತೆಯಿಂದ ಹಿಡಿಕೂಳಿಗಾಗಿ
ಮನೆಮನೆಗೆ ತಿರುಗುತಿಹ ಪರದೇಸಿ ಭಿಕ್ಷುಕಿಯು
ನೋಡಿ ಪುಳಕಿತನಾಗು ಭಯಚಕಿತನಾಗಿ.

ಕ್ಷಾಮಡಾಮರದಿಂದ ರೋಗರುಜಿನಗಳಿಂದ
ಅನ್ನವಿಲ್ಲದನಾಥ ಮನುಕುಲದ ಹಿಂಡು
ಬೀದಿಯಲಿ ಸಿರಿವಂತರುಂಡೆಸೆದ ಎಂಜಲಿಗೆ
ನಾಯಿವೊಲು ಕಚ್ಚಾಡಿ ನೆಕ್ಕುವುದ ಕಂಡು

ದಿನವೆಲ್ಲ ಬೆವರಿಳಿಸಿ ದುಡಿದ ಎಂಟಾಣೆಯನು
ಹೆಂಡದಂಗಡಿಗಿತ್ತು ಹುಳಿಹೆಂಡ ಹೀರಿ
ಗುಡಿಸಿಲಲಿ ಹಸಿದಿರುವ ಹೆಂಡತಿಯ ಹೊಡೆಯುತಿಹ
ಕುಢುಕ ಕಾರ್ಮಿಕನಿರವ ನೋಡಿ ಹೌಹಾರಿ

ಊರ ಎಂಜಲನೆತ್ತಿ ನಾಯಿನರಿಗಳನೆತ್ತಿ
ಕಸಕಡ್ಡಿಗಳ ಹೊತ್ತು ಬೀದಿಯನು ಗುಡಿಸಿ
ಧೂಳಿಗಂಗಾಸ್ನಾನದಿಂದ ಮೈಮಡಿಯಾಗಿ
ನಿಂದ ಭಂಗಿಗಳಿರವಿಗೆದೆ ಕರಗಿ ನಮಿಸಿ

ಹಾಡು ಓ ವರ ಕವಿಯೆ ನಿನ್ನ ನುಡಿ ಬೊಕ್ಕಸದ
ಮಾಣಿಕ್ಯದೊಡವೆಗಳ ತೆಗೆದು ಕೃತಿಮಾಡಿ
ಹಾಡು ದೀನಾನಾಥ ಪತಿತರೀಚರಿತೆಗಳ
ನಿನ್ನಮರ ಕಂಠದಲಿ ಅವರ ವ್ಯಥೆಮೂಡಿ.

ಪತಿತ ಪಾಮರ ದಲಿತ ಕೂಲಿ ದೀನಾನಾಥ
ಅವಿವೇಕಿ ಅಜ್ಞಾನಿ ಪಾಪಿ ಪರದೇಸಿ
ಕೃಷಿಕ ಕಾರ್ಮಿಕ ರೋಗಿ ಯುವಜನ ನಿರುದ್ಯೋಗಿ
ತಿರುಕಿ ತಿಪ್ಪೆಯ ಭಂಗಿ ಮೇಣ್ ದೇವದಾಸಿ

ಇವರ ನೀಂ ಸ್ವಾಗತಿಸಿ ಇವರ ನೀನಾದರಿಸಿ
ಕನಿಕರಿಸಿ ಸತ್ಕರಿಸಿ ಪೂಜೆಯಂ ಸಲಿಸಿ
ರುದ್ರವೀಣೆಯ ಮಿಡಿದು ಸಿಡಿಲು ದನಿಯಂ ನುಡಿದು
ಇವರ ಚರಿತೆಯ ಹಾಡು ಭಕ್ತಿಯಲಿ ನಮಿಸಿ.

ಮಾನವಂ ದೇವೇಂದ್ರನಾಗುವೊಲು ನೀಂ ಮಾಡು
ಬಾಳೆಲ್ಲ ಬಂಗಾರವಾಗುವೊಲು ಹಾಡು.
ಹೊಸ ನೋಟವನು ನೋಡು ಹೊಸ ಹೂಟವನು ಹೂಡು.
ನವಸೃಷ್ಟಿಯನ್ನೆಸಗು ಹಳತು ದೂಡು.

ಇಂದಿನೀ ಶತಮಾನ ಯುವಜನರ ಶತಮಾನ
ಇಂದಿನೀ ಶತಮಾನ ಸರ್ವರ ಸುಮಾನ.
ಸರ್ವಸಮತಾ ಭಾವವಿಂದಿನ ಮಹಾಭಾವ
ದೀನದಾಮೋದರನೆ ಇಂದಿನ ಸುದೈವ.

ಇಂದಿನೀ ಯುಗಧರ್ಮವೆಂತಿರುವುದದನರಿತು
ಕೃತಿ ಶತವ ರಚಿಸಿ ನೀಂ ಕೃತಕೃತ್ಯನಾಗು.
ವಿಶ್ವವ್ಯಾಪಕ ತತ್ವವಾವುದೆಂಬುದ ಕುರಿತು
ಅದನೆ ನೆನೆನೆನೆದರಿತು ಅದಕೆ ಶಿರಬಾಗು.

ಅಮರವಾಗುವುದೆಂದು ನಿನ್ನಮಳ ಕೃತಿಶತವು
ಅಮೃತವೆನಿಸುವುದೆಂದು ನಿನ್ನೊಲುಮೆ ನುಡಿಯು
ಧವಳದೀಧಿತಿಯಾಗಿ ನಿತ್ಯನೂತನವಾಗಿ
ಬೆಳಗುವುದು ಮೇಣಂದು ನಿನ್ನರಿವು ಕಿಡಿಯು.

# ಜಗವೆ ಹೊತ್ತಗೆಯಾಗೆ

ಜಗವೆ ಹೊತ್ತಗೆಯಾಗೆ ಬೇರೆ ಹೊತ್ತಗೆಯೇಕೆ
ಜೀವನವೆ ಕೃತಿಯಾಗೆ ಬೇರೆ ಕಾವ್ಯಂ ಬೇಕೆ ?
ದಿನದಿನವು ನಡೆಯುತಿಹುದಿಲ್ಲಿ ರಾಮಾಯಣಂ.
ಕಣ್ಣೆದುರೆ ಕಾಣುತಿಹುದಾ ಮಹಾಭಾರತಂ.
ವಿಶ್ವಕವಿಗಳ ಮಹಾಕಾವ್ಯ ಪ್ರಪಂಚದಲಿ
ಉತ್ಪ್ರೇಕ್ಷೆಯಾಗಿರ್ದುದಿಲ್ಲಿ ವಾಸ್ತವಸಹಜ.
ಆ ಪ್ರಪಂಚದ ಒಗಟೆಗಿಲ್ಲಿ ಈ ಬದುಕಿನಲಿ
ಉತ್ತರಂ ದೊರೆವಂತೆ ಈ ಕಾವ್ಯವಿಹುದು ನಿಜ.
ಒಂದೆ ಜೀವನ, ಕಾವ್ಯನಾಟಕ ಕಥಾಸೂತ್ರ
ಖೇದ ಆಮೋದಾಂತ ಕೃತಿಯಾಗಿ ತೋರುವುದು.
ನವರಸಂಗಳನಿಲ್ಲಿ ಒಂದೆ ಕಾವ್ಯದ ಪಾತ್ರ
ಸುಪ್ರೌಢಿಯಿಂ ಮೆರೆಯುತಭ್ಯಸಿಸಿ ತೋರುವುದು.
ನಿತ್ಯನೂತನವಾದ ಈ ಬೃಹತ್ಕಾವ್ಯಮಂ
ಕಣ್ತೆರೆಯುತಭ್ಯಸಿಸಿ ಚರಿತಾರ್ಥನಾಗು ನೀಂ.

# ಒಂದು ಮಾತು

ನಿನ್ನ ಚಿನ್ನ ಮೂಸೆಯೊಳಗೆ
ಕುದಿಯುತಿರಲಿ ಕರಗುತಿರಲಿ.
ನಿಗಿನಿಗಿಸುವ ಕೆಂಡದುರಿಗೆ
ಮಿಡುಕಬೇಡ ದುಡುಕಬೇಡ.
ಚಿನ್ನ ಕಾವಿನುರಿಗೆ ಕರಗಿ
ತನ್ನ ಕಾಳಿಕೆಯನು ನೀಗಿ
ಮಿರುಮಿರುಗುತಲೆಸೆವುದು.

ಲೋಕವೊಂದು ಹಿರಿಯ ಮೂಸೆ
ದುಃಖವೊಂದು ಸುಡುವ ಬೆಂಕಿ
ಅದರೊಳಿರುವ ನಿನ್ನ ಬಾಳು
ಕೊಳೆಯುರುಹಿದ ಸತ್ವವಹುದು-
ಅದರಿನಂತೆ ಏಕೆ ಚಿಂತೆ
ಸಹನಶೀಲ ನೆನಿಸುತೆ
ಬಾಳು ಚಿನ್ನವಾಗುತೆ.

# ಬೇಟೆ

ನಡುಗಟ್ಟಿ ಹಯ ಹತ್ತಿ ಜಡದ ವಿಶ್ವವ ಸುತ್ತಿ
ಕಡುಬಳಲಿ ಬೆಂಡಾಗಿ ಬೇಟೆಯರಸಿ
ಬಿಡದೆ ಬೇಟೆಯ ಬಳಸಿ ದುಡುಕಿ ಕೈವ್ಯೆಯಲಸಿ
ಬಿಡಲಿರಲು ಯತ್ನವನು ಬೇಟೆ ಸುಳಿಯೆ
ಕೋರಿದಾ ಬೇಟೆ ಸಿಗೆ ಹಾರಿ ಹಯ ತೋಷ ಮಿಗೆ
ವೀರಮುಂಡಿಯನಿಕ್ಕಿ ಬೇಟೆ ನೋಡಿ
ನೇರ ಗುರಿಯಿಟ್ಟದುಮಿ ನಾರಿಯಿಂದಂಬ ಕಿವಿ-
ಮಿಾರಿ ಬರುವಂತೆಳೆದು ಬಿಡುವೆ ಸರಳಂ.
ಮಿಸುಗದೆಯೆ ಹೆದೆ ಮಿಕ್ಕಿ ಅಸವಸದಿ ಗುರಿ ಕುಕ್ಕಿ
ಬಸಿವ ನೆತ್ತರ ಸರಳು ತೋರ್ಪುದೆಂದು
ಎಸೆವಲಗ ಬಲುನೆಚ್ಚಿ ಜಸದ ಆಸೆಯು ಹೆಚ್ಚಿ
ಮಸೆದಂಬು ಮಿಸುಗುವುದು ಆಸೆ ವಿಫಲ.

# ಅಮೇರಿಕದ ವೈಮಾನಿಕನಿಗೆ

ನಿನ್ನ ತನುಗಾತ್ರವಂ ತೂಗಿ ಸಲೆ ತಲೆದೂಗಿ
ನಿನ್ನ ವೈಯೆತ್ತರವ ನಳೆದು ಸೈವೆರಗಾಗಿ
ನಿನ್ನೆದೆಯ ಬಡಿತವಂ ಮೇಣ್ನಾಡಿ ಮಿಡಿತವಂ
ಧೀಶಕ್ತಿಯಂ ಮತ್ತೆ ಅಕ್ಷಿಯ ಪಟುತ್ವವಂ
ಕೊಂಡಾಡಿ ಪೂಡಿದರ್ ಗಗನಯುದ್ಧೋದ್ಯಮಕೆ;
ದಿವ್ಯನಾಗರಿಕತೆಯ ಸರ್ವಸುಖಗಳ ಸಲಿಸಿ
ನಿನ್ನಾತ್ಮವಂ ನಶಿಸಿ ಚಿಜ್ಜ್ಯೋತಿಯಂ ಕಿಡಿಸಿ
ಸಮರ ಶಿಕ್ಷಣವೀಯೆ; ವಿಲಯ ಸಮ ಸಂಗರಕೆ
ಓ ಅಮೇರಿಕ ದೇಶದಮಳ ವೈಮಾನಿಕನೆ!
ಯಂತ್ರ ವಿಜ್ಞಾನಕಲೆ ಕರತಳಾಮಲಕಮೆನೆ
ಪರಮಾಣು ಸಿಡಿಮದ್ದಿನೊಡನೆ ನೀನೈತಂದೆ
ಸುಂಧರ ವಸುಂಧರೆಯ ಜೀವಜಾಲವ ಕೊಂದೆ
ನವಯುಗದಸಂಸ್ಕೃತಿಯ ನಾಗರಿಕ ಅವತಾರ!
ನಿನಗಿದೋ ಧಿಕ್ಕಾರ ಸಾವಿರ ತಿರಸ್ಕಾರ!

## ಅಮರ ವಾಣಿ

ದೇವದೇವನು ತನ್ನ ಗುಡಿಯನು
ಪ್ರೇಮ ಭಕ್ತಿಗಳಿಂದ ನಿರ್ಮಿಸಿ—
ರೆಂದು ಪ್ರೇರಿಸುತಿರುವನು.
ಆದರಾತನ ಪೂಜ್ಯಭಕ್ತರು
ನಾವು ಗುಡಿಯನು ಕಟ್ಟಲೋಸುಗ
ಕಲ್ಲು ಮಣ್ಣನು ತರುವೆವು.

ಒಂಟಿದೇಗುಲದಲ್ಲಿ ನಿಲ್ಲದೆ
ಓಡಿಬರುವರು ಎಳೆಯ ಬಾಲರು
ಧೂಳಿನೊಳಗುರುಳಾಡಲು.
ದೇವನವರೆದುರಲ್ಲಿ ಮರೆವನು
ಓವಿ ಪೂಜಿಪ ಗುಡಿಯ ಭಕ್ತನ
ಮಂತ್ರ ತಂತ್ರದ ಪೂಜೆಯ.

## ಅಣ್ಣ ತಮ್ಮನಿಗೆ ಬರೆದ ಓಲೆ

ಹಾಲುಗೆನ್ನೆಯ ನನ್ನ ಮುದ್ದು ಮೋಹನ ತಮ್ಮ!
ನಿನ್ನ ಕಾಗದವೋದಿ ಮರುಗಿ ನೊಂದಳು ಅಮ್ಮ.
ಪೊಲ್ಲದುದ ನೀಂ ನೆಗಳಿ ಪಾಳ್ಗೈದೆ ಕಜ್ಜಮಂ.
ಶಾಲೆಯಂ ಬಿಟ್ಟೋಡಿ ಕಡೆಗಣಿಸಿ ಬಿಜ್ಜೆಯಂ
ರಾಜಕೀಯದ ಉರಿಗೆ ಚಿಟ್ಟೆವೊಲು ನೀನಾದೆ.
ಓದು ಬರೆಹದ ಕಲೆಗೆ ಕುಟ್ಟೆಹುಳುವೋಲಾದೆ.
ಬರಿಯ ಜಯಘೋಷಕ್ಕೆ ಮುಕ್ತಿ ದೊರೆಯುವುದುಂಟೆ?
ಮಂತ್ರಕ್ಕೆ ಮಾಂಗಾಯಿ ಮಡಲಿಗುದುರುವುದುಂಟೆ?
ಸಿಂಹ ಘರ್ಜನೆ ಕೇಳಿ ಮದಗಜವು ಬೆದರುವೊಲು
ಬೆದರುವುದೆ ತಾನೆನಿತು ಕಿರಿಚಿದರು ಕುರಿಮರಿಯು.
ನಖ ದಂಷ್ಟ್ರ ಕೇಸರಂಗಳ ಬೆಳಸಿ ಘರ್ಜಿಸೈ.
ನಾಡಿನುನ್ನತಗತಿಯ ಮೇಣಂದೆ ಆರ್ಜಿಸೈ.
ಅದುವರೆಗುಮೆಂದಿನವೊಲೋದಿ ಸನ್ಮತಿಗಳಿಸಿ
ತಾಯ ಮಾತಂ ಸಲಿಸು ಸಭ್ಯತೆಯ ನಭ್ಯಸಿಸಿ.

# ನೆನೆಯದಿರು

ಅಂದಂದಿಗೆ ಸಂದುಹೋದ
ಹಿಂದಿನದನು ಸ್ಮರಿಸಿಕೊಂಡು
ಎಂದೆಂದಿಗು ಮುಂದೆ ಅದನೆ
ನೆನೆದದೇಕೆ ಕೊರಗುವೆ.
ಅಂದಿನ ದಿವಸಕದುವೆ ಚೆಲುವು
ಇಂದಿನ ದಿವಸಕಿದುವೆ ಚೆಲುವು
ಇದುವೆ ಗೆಲವು ಇದುವೆ ಒಲವು
ಇದೇ ಇರಲಿ ಎನ್ನುವೆ.

ಹಿಂದೆ ಸಂದುದೇನೆ ಸಲಲಿ
ಮುಂದೆ ಬರುವುದೇನೆ ಬರಲಿ
ಇಂದಿನದೆನಗೆ ಇದೇ ಚೆನ್ನ
ಇದನೆ ಕೂಡಿ ಸವಿಯುವೆ.
ದಿವಾರಾತ್ರಿ ಉರುಳುತಿರಲಿ
ವರ್ಷವರ್ಷ ಕಳೆಯುತಿರಲಿ
ನೋವೊ ನಲಿವೊ ಯಾವುದಿರಲಿ
ಆದನೆ ಒಲಿಸಲೆಳಸುವೆ.

ಕೈಯಬಿಟ್ಟು ಹೋಯ್ತು ಕೆಲವು
ಕೈಗೆ ಎಟುಕದಿಹವು ಹಲವು
ಇದ್ದೂ ಇಲ್ಲದಂತೆ ಇಹವು.
**ಆದರದಕೆ ಚಿಂತೆಯೆ.**

ಎಷ್ಟು ಸಿಕ್ಕರಷ್ಟೆ ಕಡೆಗೆ
ಪಡೆದಷ್ಟಕೆ ತೃಪ್ತಿಯಾಗೆ
ಇದೇ ಈಪ್ಸಿತಾರ್ಥವೆನುವೆ
ಮತ್ತೆ ಎಂದಿನಂತೆಯೆ.

# ಬ್ರಾಹ್ಮಣನಿಗೆ

ವೇದಶಾಸ್ತ್ರಾಧ್ಯಯನ ಜಪತಪ ಸಮಾಧಿಯಿಂ
ದಾತ್ಮಸಾಕ್ಷಾತ್ಕಾರದಾನಂದ ಸಿದ್ಧಿಯಿಂ—
ದಾರ್ಯನೆನೆ ಪಾರ್ವನೆನೆ ಆಚಾರ್ಯವರ್ಯನೆನೆ
ವರ ಪುರೋಹಿತನೆಯೆನೆ ಭೂಸುರೋತ್ತಮನೆಯೆನೆ
ನಿನ್ನ ಪೂರ್ವಜನಂದು ಬಾಳಿದನ್ ಪಿರಿದಾಗಿ
ತಾನೊಮ್ಮೆ ಲೋಕ ಕಲ್ಯಾಣ ಸಾಧಕನಾಗಿ.
ಕಾಲಚಕ್ರಂ ಪೊರಳೆ ನೀನೀಗಳೇನಾದೆ!
ಪಾಚಿಯಾವರಿಸಿದ ಸರೋವರದವೋಲಾದೆ.
ಬೂದಿಮುಚ್ಚಿದ ಬೆಂಕಿ ಕೆಂಡದುರಿವೋಲಾದೆ.
ಮಸೆಯುದೆಯೆ ಮಣ್ತಿಂದ ಖಡ್ಗಧಾರೆವೋಲಾದೆ.
ಇನ್ನುಮವನತಿಗಾಣ್ವ ಮೊದಲೆ ಮೇಲೆದ್ದೇಳು.
ಧೀಯಂ ಪ್ರಚೋದಿಸುತ್ತಗ್ನಿಯಂ ಪ್ರಜ್ವಲಿಸಿ
ನಿನ್ನೊಳಗ ನೀಂ ಬೆಳಗಿ ಆಚಾರ್ಯನೆಂದೆನಿಸಿ
ಪೂರ್ವಜರೊಲೇಗಳುಂ ಪಿರಿಯನೆನೆ ನೀಂ ಬಾಳು.

# ಒಸಗೆ

ಒಂದು ಕಾಲವು ಬರಲು ನವಿಲು ನಾಟ್ಯಂಗೈವು-
ದೊಂದು ಕಾಲವು ಬರಲು ಪಿಕವು ನಲಿಯುವುದು.
ಒಂದು ಕಾಲವು ಬರಲು ಇಮ್ಮಾವು ಫಲ ಬಿಡುವು-
ದೊಂದು ಕಾಲವು ಬರಲು ಪಲಸು ಪಣ್ಣಹುದು.

ಒಂದು ಕಾಲವು ಬರಲು ಕೇದಗೆಯು ಹೊಡೆ ಬಿರಿವು-
ದೊಂದು ಕಾಲವು ಬರಲು ಮೊಲ್ಲೆ ಹೂವಹುದು.
ಒಂದು ಕಾಲವು ಬರಲು ಜಡಿಮಳೆಯು ಸುರಿಯುವುದು.
ಒಂದು ಕಾಲವು ಬರಲು ಬಿಸಿಲು ಕಾಯುವುದು.

ಒಂದು ಕಾಲವು ಬರಲು ಬೆಳುದಿಂಗಳಿಂಬಹುದು
ಬೇರೊಂದು ಕಾಲದಲಿ ಅದೆ ಅಹಿತವಹುದು.
ಒಂದು ಕಾಲವು ಬರಲು ತೆಂಗಾಳಿ ಸುಖವಹುದು.
ಬೇರೊಂದು ಕಾಲದಲಿ ಅದೆ ದುಃಖವಹುದು.

ಒಂದು ಕಾಲವು ಬರಲು ಕೆಳೆಯೊಲುಮೆ ಸೊಂಪಹುದು
ಬೇರೊಂದು ಕಾಲದಲಿ ಅದುವೆ ಹಗೆಯಹುದು.
ಒಂದು ಕಾಲವು ಬರಲು ಅಗಲಿಕೆಯೆ ಸೊಗವಹುದು
ಬೇರೊಂದು ಕಾಲದಲಿ ಮಿಲನ ಚೆನ್ನಹುದು.

ಒಂದೊಂದು ಕಾಲದಲಿ ಒಂದೊಂದು ರೀತಿಯಲಿ
ಒಂದೊಂದು ಸುಖವಹುದು ದುಃಖವಹುದು.
ಅದರದರ ಕಾಲದಲಿ ಸುಖದುಃಖಗಳ ಸವಿದು
ಬಾಳ ಹಸನಾಗಿಪುದೆ ಸೃಷ್ಟಿಯೊಂದೊಸಗೆ.

# ಭಟ್ಕಳ

ಕನ್ನಡ ನಾಡಿನ ಉಜ್ವಲ ಕೀರ್ತಿಯ
ಬಾವುಟವಲ್ಲವೆ ಭಟ್ಕಳವು.
ಕನ್ನಡ ನಾಡಿನ ರಮ್ಯ ಮನೋಹರ
ನೋಟವಿದಲ್ಲವೆ ಭಟ್ಕಳವು.
ಉತ್ತರ ದಕ್ಷಿಣ ಕನ್ನಡ ಜಿಲ್ಲೆಯ
ಕಣ್ಮಣಿಯಲ್ಲವೆ ಭಟ್ಕಳವು.
ಕರುನಾಡ ದೇವಿಯ ಕೊರಳ ಕಟ್ಟಾಣಿವೊ—
ಲೆಸೆಯುವುದಲ್ಲವೆ ಭಟ್ಕಳವು.
ಪಡುವಣ ಕಡಲಿನ ಕರೆಯೊಳಗಿರುವಂಥ
ಬಂದರವಲ್ಲವೆ ಭಟ್ಕಳವು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಸುತ್ತಲ ಗುಡ್ಡವು ಕಡಲತ್ತ ಚಾಚಿರೆ
ನಡುವಣ ಭೂಮಿಯು ಹಳ್ಳವಿರೆ
ತೆಮರೇರಿ ನೋಡಿದ ಭಾವುಕನೀ ಊರ
'ಬಟ್ಟಲಕುಳಿ' ಯೆಂದೆ ಭಾವಿಸಿರೆ
ಅಂತೆಯೆ ಕರೆಯಲು ಕಾಲಾನುಕಾಲಕ್ಕೆ
'ಭಟ್ಕಳ' ವಾಯಿತಿದೆನ್ನುವರು.
ಭಟ್ಕಳ ಬಂದರ ಮೇಗಡೆ ಬಂಗಲೆ—
ಯಂಗಳದಲಿ ನಿಂದು ನೋಡುತಿರೆ
ಒಮ್ಮೆಗೆ ಮೈಮರೆಯಿಸುವಂಥ ಮಹಿಮೆಯ
ಅದ್ಭುತ ದರ್ಶನ ಮೂಡುತಿರೆ
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಕಣ್ಣಿಗೆ ಕಾಣಿಸಿತೇನೆಂಥ ಚೆಲುವೆಂದು
ನೆಲ ಜಲ ಮುಗಿಲಿನ ಮೇಳದಲ್ಲಿ
ಒಂದರಿನೊಂದತಿ ಶೋಭೆಯ ಪಡೆದಿರ—
ಲದರ ಆನಂದವ ಮರೆಯುವರೆ.
ನೀಲಿಮ ಸಾಗರ ನೀಲಿ ನಭೋಂಗಣ
ನೀಲ ಸಹ್ಯಾದ್ರಿಯ ಶಿಖರಗಳು!
ತಾಯಿ ವಸುಂಧರೆ ತೊಡವಾಗಿ ಧರಿಸಿದ
ಹಚ್ಚನೆ ಹೊಲಗದ್ದೆ ತೋಟಗಳು!
ಉತ್ತರ ದಿಕ್ಕಿಗೆ ಮೊಗಮಾಡಿ ಮಲಗಿದ
ಉನ್ನತ ಮಲೆಗಳ ಮಾಲೆಗಳು!
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಕೆಳಗಣ ಕಣಿವೆಯೊಳಾವುದೊ ತೊರೆಯೊಂದು
ಮಿಂಚಿನ ಝರಿಯಂತೆ ಹರಿಯುವುದು.
ಸಂಗಮ ಸೌಖ್ಯದ ಮಧುರ ಮನೋಹರ
ಶಾಂತಿಯೊಳದ್ದಿದ ಪರಿಯೆನುವಂತೆ
ತೋರುವುದೊಮ್ಮೆಗೆ ತಾನೆ ಕಡಲಾದಂತೆ
ಮತ್ತೊಮ್ಮೆ ತೋರ್ಪುದು ತಾನಿಲ್ಲದಂತೆ.
ಆ ತೊರೆಯಿಕ್ಕೆಲದಾಚೆಗೆ ಈಚೆಗೆ
ತೂಗುವ ತೆಂಗಿನುಯ್ಯಾಲೆ ನೋಡು.
ತೆಂಗಿನ ಗರಿಗಳ ಗುಡಿಲಿನೊಳಾಡುವ
ಕಡಲಿನ ಮಕ್ಕಳ ಚೆಲುವ ನೋಡು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಕಣ್ದಿಟ್ಟಿ ಹೊರಳಿಸಿ ಕಡಲತ್ತ ಹಾಯಿಸು,
ನೀಲಿಮ ವಾರಿಧಿ ಏನು ಸೊಗಸು!

ತೆರೆಯನು ತೆರೆಯಟ್ಟಿ ಉಬ್ಬುಬ್ಬಿ ಮೇಲೆದ್ದು
ಎದೆಯುದ್ದ ಕೊರಳುದ್ದ ಆಳುದ್ದವಾಗಿ,
ಬಾಗಿ ಮೈ ಬಳುಕಿಸಿ ತೂಗಿ ತಲೆದಿರುಗಿಸಿ
ಹೊಡೆ ಮುರಿಯುತಪ್ಪಳಿಸಿ ಉರುಳುರುಳುತೆ;
ಜುಳುಜುಳನೆ ನೊರೆಗರೆದು ಗುಳುಗುಳನೆ ಸುಳಿಸುಳಿದು
ದಡಕೆ ಕಚಕುಳಿ ಇಡುವ ಕಡಲ ನೋಡು.
ಖೇದ ಆಮೋದದ ರೋಷ ಸಂತೋಷದ
ತೆರೆಗಳ ಪರಿಪರಿ ಲೀಲೆ ನೋಡು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಅಲೆಯಾಗಿ ಹನಿಯಾಗಿ ಒಡೆದೊಡೆದು ಮುತ್ತಾಗಿ
ಬೆಳ್ಳಿಯ ನೆರಿಗೆಯ ಹಾಸಿ ಹರಹಿ;
ನುಣ್ಣನೆ ಮರಳನು ಬೆರಳಾಡಿ ಮುದ್ದಿಸಿ
ಮರಳುವ ಕಡಲಿನ ಮೋಹ ನೋಡು.
ಮೋಹದ ಕಡಲಿನ ಮೇಲಾಡುತಿರುವಂಥ
ಬೆಸ್ತರ ಮಕ್ಕಳ ಪಾತಿ ನೋಡು.
ಗಾಳಿಗೆ ಬೀಸಿದ ಹಾಯಿಗಳೋಡುವ
ಸೊಗಸಿನ ನೋಟವ ಕಂಡೆಯೇನು.
ಹಾಯಿಗು ಮಿಗಿಲಾಗಿ ಸಾಗುತಲಿರುವಂಥ
ದೂರದೆ ತೋರುವ ಮಂಜಿ ನೋಡು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆ-ದೆಯುಬ್ಬುವುದುಕ್ಕುವುದು.

ಬಂದರಿನಂಗಳದಲಿ ನೆಟ್ಟ ದೀಪದ
ಕಂಬದ ಬಳಿಯಲಿ ನಿಂದು ನಾನು
ಭಟ್ಕಳ ಬಂದರ ನೂತನ ನಿರ್ಮಾಣ
ಕೃತಿಯಾಗಿ ಕಂಡುದ ನೋಡಿದೆನು.

ಕಡಲಾಚೆಗಣಿಯಾಗಿ ಸಾಗಲು ನಿಂತಿಹ
ನೌಕೆಗಳೋರಂತೆ ಕಾಣಿಸಿತು.
ಹಡಗಿನ ಒಡೆಯರ ಸಿರಿನುಡಿ ಕೇಕೆಯು
ಕೋಲಾಹಲವೊಮ್ಮೆ ಕೇಳಿಸಿತು.
ನಾವಿಗ ನೌಕರರಂಬಿಗ ಕೂಲಿಗ—
ಕೂಕ್ಕೂಟ ದಡದಲಿ ಸಂಧಿಸಿತು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಬೇರೊಂದು ಕಡೆಯಲಿ ದೂರದ ನೌಕೆಯ
ಕರೆಯಲಿ ನಿಂತವರೀಕ್ಷಿಸಿರೆ
ಸಾಗರ ಯಾನಾರೋಹಣಕಣಿಯಾಗಿ
ಸೀಮೋಲ್ಲಂಘನ ಮಂದಿಯಿರೆ,
ಸಂಜೆಯ ವೇಳೆಗೆ ನಲ್ಲನಲ್ಲೆಯರೊಂದು
ಮಳಲ ದಂಡೆಯೊಳತ್ತ ವಿಹರಿಸಿರೆ,
ಸೆಟ್ಟಿ ಮಾರ್ವಾಡಿಯು ಭಾರಿ ಜಮೀನ್ದಾರ-
ರೊಂದಾಗಿ ವ್ಯವಹಾರ ಬೆಳಸುತಿರೆ,
ದೇಶ ವಿದೇಶದ ವೇಷ ವಿನೋದದ
ಬೆರಕೆಯ ಮಂದಿಯು ಸಂಧಿಸಿರೆ,
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಎಲ್ಲಿಡೆ ಕನ್ನಡ ನುಡಿಯೊಂದೆ ಮುಂದಾಗಿ
ಕನ್ನಡ ಜನಗಳೆ ಮೇಲಾಗಿರೆ,
ಕವಿದಂಥ ಕತ್ತಲನೋಡಿಸುವಂದದಿ
ಸಜ್ಜಾಗಿ ನಿಂತಿಹ ನೌಕೆಗಳು
ಲಕ್ಷ ದೀಪೋತ್ಸವ ನಡಸುತಿರುವಂದದಿ
ನಾಡಿನ ದೈವವ ಬೆಳಗುತಿರೆ,

ಬಂದರ ಮಳಿಗೆಯ ಮೂಳಿಗೆಯೊಳಗಣಿಂ
ಮಿಣಿಮಿಣಿ ದೀಪಗಳುರಿಯುತಿರೆ,
ಬಂದರಿಂದೂರಿಗೆ ಊರಿಂದ ಬಂದರಿ-
ಗೋರಂತೆ ಯಾನಗಳೋಡುತಿರೆ,
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ನಾಡಿಂದ ಕಡಲಿಗೆ ಕಡಲಿಂದ ನಾಡಿಗೆ
ಧನಕನಕ ವಸ್ತುವನೊಯ್ಯುತಿರೆ,
ಕನ್ನಡ ನಾಡಿನ ಹೊರನಾಡ ವ್ಯಾಪಾರ
ಬಂದರ ಮೂಲಕ ಸಾಗುತಿರೆ,
ಹೊನ್ನಿನ ಹೊಳೆಯಾಗಿ ಹೊರ ಊರ ಸಿರಿಯೆಲ್ಲ
ಒಳನಾಡಿಗೋರಂತೆ ಹರಿಯುತಿರೆ,
ಕನ್ನಡ ಭಾಗ್ಯದ ಬಾಗಿಲ ತೆರೆದಂಥ
ಭಟ್ಕಳ ಬಂದರ ನಿರ್ಮಾಣದ
ಸುಂದರ ಮುನ್ನೋಟದಂದದ ಕಣಸೊಂದು
ಕಾಣಿಸಿತೆನಗಂದು ನೋಡಿದೆನು.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಬಂದರಿನಂತೆಯೆ ಭಟ್ಕಳದೂರಿನ
ಇನ್ನಿತರ ಚೆಲುವನು ಹೇಳಲೇನು!
ಇಲ್ಲಿನ ಕಬ್ಬಿನ ಜಲ್ಲೆಯ ಕಚ್ಚಿದ—
ರೊಸರುವ ಹಾಲಿನ ಸವಿಯೆಂಥದು!
ಇಲ್ಲಿಯ ವೊಲ್ಲೆಯ ಮಗ್ಗಿನ ಮಾಲೆಯ
ಮುಡಿದರೆ ಸೂಸುವ ಕಂಪೆಂಥದು!

ಇಲ್ಲಿಯು ಕಡಲಿನ ತಣ್ಣನೆ ಗಾಳಿಗೆ
ಮೈದೆರೆಯಲಾಗುವ ಸುಖವೆಂಥದು !
ನೋಟಕಾನಂದವ ತುಂಬುವ ಸುತ್ತಲ
ಗಿಡ ಮರ ಬಳ್ಳಿಯ ಚೆಲುವೆಂಥದು !
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಇಲ್ಲಿ ನವಾಯತರಿಲ್ಲಿ ಸಾರಸ್ವತ—
ರಿಲ್ಲಿ ಹವೀಕರ ಮನೆಗಳಿದೆ.
ಎಲ್ಲರ ಮನೆಯಲಿ ಕನ್ನಡ ಮಾತಿನ
ಮಡಿಜೇನು ನಿತ್ಯವು ಬಳಸಲಿದೆ.
ಎಲ್ಲರ ಮನೆಯಲಿ ಮಾವಿನ ಹಣ್ಣಿದೆ
ಗೇರಿನ ಹಣ್ಣಿದೆ ಎಳನೀರಿದೆ.
ಸಂಪಗೆ ಹೂವಿದೆ ಮಲ್ಲಿಗೆ ಹೂವಿದೆ
ಪರಿಮಳವೆರೆಯುವ ರಂಜವಿದೆ
ಆಟದ ಪಾಟದ ನೋಟದ ಬೇಟದ
ಪರಿಪರಿ ಚೆಲುವಿನಾಮೋದವಿದೆ.
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

ಮುಗಿಲಿನ ಮರಿಗಳ ಮೊಲೆಯೂಡಿ ಸಲಹುವ
ಮಹತಾಯಿ ಸಹ್ಯಾದ್ರಿ ಹರಕೆಯಿರೆ,
ಯಂತ್ರದ ಋಷಿಗೈದ ತಪಸಿಗೆ ಮೆಚ್ಚಿದ
ದೇವಿ ಶರಾವತಿ ರಕ್ಷೆಯಿರೆ,
ಸಾಹಸದೋರುವ ಕೆಚ್ಚಿನ ಕನ್ನಡ
ಹಿರಿಯರ ನಚ್ಚಿನ ದೀಕ್ಷೆಯಿರೆ,

ಕನ್ನಡ ರಾಣಿಯ-ಕಡಲಿನ ರಾಣಿಯೆಂ—
ದೆನಿಸುವ ಭಾಗ್ಯವು ನಿನಗಿಲ್ಲವೆ!
ಅಂಥ ಸೌಭಾಗ್ಯವ ನೋಡಿ ನಲಿದಾಡುವ
ಪುಣ್ಯದ ಯೋಗವು ನನಗಿಲ್ಲವೆ!
ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿಯೆದೆಯುಬ್ಬುವುದುಕ್ಕುವುದು.

# ವಿಶ್ವವಿದ್ಯಾನಿಲಯದ ರಜತ ಮಹೋತ್ಸವ

ಇದು ನಮ್ಮ ವಿಶ್ವವಿದ್ಯಾಲಯದ ಪಂಚವಟಿ.
ಕನ್ನಡಿಗರಧಿದೇವಿ ತಪ ನಿಂದ ಪರ್ಣಕುಟಿ.
ಇದು ವೇದಿ ಕನ್ನಡದ ರಸ ವಿದ್ಯೆಯೋಜರಿಗೆ,
ಇದು ಬೋಧಿ ಕನ್ನಡದ ಸಿದ್ಧಾರ್ಥರೆಲ್ಲರಿಗೆ,
ಮೇಣಿದು ಕುರುಕ್ಷೇತ್ರ ಕನ್ನಡದ ಪಾರ್ಥರಿಗೆ.
ಇದು ಪವಿತ್ರ ಕ್ಷೇತ್ರ ಜ್ಞಾನ ಗಂಗಾ ತೀರ್ಥ.
ಈ ಜ್ಞಾನ ತೀರ್ಥದಲಿ ಮಿಂದು ಜನ ಮುಡಿಯುಟ್ಟು
ಈ ತಾಯಿಯಡಿಯಲ್ಲಿ ನಿಂದು ಜನ ಮುಡಿಯಿಟ್ಟು
ತೃಷೆ ನೀಗಿ ಕ್ಷುಧೆ ನೀಗಿ ಪೂತಾತ್ಮರೆನಿಸಿ
ಬಾಳುತಿಹರೊಲವಿನಿಂ ಕೃತಕೃತ್ಯರೆನಿಸಿ.

ಇಲ್ಲಿ ನಾಗರಿಕತೆಯು ತೂಗುಯ್ಯಲಾಡುವುದು.
ಇಲ್ಲಿ ಸಂಸ್ಕೃತಿಯ ಶಿಶು ಪಾಲುಂಡು ಬೆಳೆಯುವುದು.
ರಾಜ ಪ್ರಜೆ ನಾಡು ನುಡಿಗಳ ಸೇವೆ ತಮದೆಂದು
ನೆಲ ದೇವಿ ಮಕ್ಕಳುಗಳಾಣೆ ಕೊಳ್ಳುವುದಿಲ್ಲೆ.
ನುಡಿ ದೇವಿ ಭಕ್ತ ಜನ ಮುಡಿಪು ಕಟ್ಟುವುದಿಲ್ಲೆ.
ಬಹು ಜನದ ಬಹು ಮತದ ಹಿತದ ಬೆಳೆಗಿಲ್ಲೆ ಮಳೆ—
ಯಾಗುವುದು. ಬಹು ನಡೆಯ ಬಹು ನುಡಿಯ ಕೆಳೆ—
ಯಿಲ್ಲೆ ಮೊಳೆದೋರುವುದು, ಬೆಳೆದು ಕುಡಿಯೊಡೆಯುವುದು.
ಇಲ್ಲೆ ಸ್ವ-ಪರ ಕ್ಷೇಮ ಸಂಪತ್ಸಮೃದ್ಧಿ.
ಇಲ್ಲೆ ಇಹ ಪರಲೋಕದಾನಂದ ಋದ್ಧಿ.

ತ್ಯಾಗ ಭೋಗವನಿಲ್ಲಿ ಕೈಹಿಡಿದು ನಡಸುತಿದೆ.
ಚಿತ್ತ ಕರ್ಮವನಿಲ್ಲಿ ಧರ್ಮ ಪಥಕೊಯ್ಯುತಿದೆ.
ಸಿದ್ಧಿ ಸಾಧಕರನಾಲಂಗಿಸುತ್ತಿಹುದಿಲ್ಲಿ.
ಬುದ್ಧಿ ಭಾವುಕರನಾಕರ್ಷಿಸುತ್ತಿಹುದಿಲ್ಲಿ.
ಹೃದಯವಾನಂದವನು ಕಂಡುಕೊಳ್ಳುವುದಿಲ್ಲಿ.
ಅವಿದ್ಯೆಯುಂ ವಿದ್ಯೆ ಅಜ್ಞಾನವುಂ ಜ್ಞಾನ
ತಮದುಂಧವಂ ಜ್ಯೋತಿ ಕಾಳರಾತ್ರಿಯುನರುಣ
ಕಳ ನಿಂದು ಗೆಲ್ಲುತಿಹರಾಗೆಲುವಿನೋಲಗದಿ
ನಮ್ಮ ಶಾರದೆ ತನ್ನ ಶಿಷ್ಯರಂ ಕರೆದು
ಹರಸುವಳು ಮಕ್ಕಳಂ ಪ್ರೀತಿಯುಂ ಮೆರೆದು.

ಕವಿಗಳಂ ಪಡೆದೆ ರಸ ಋಷಿಗಳಂ ಪಡೆದೆ.
ಜ್ಞಾನಿಯುಂ ಪಡೆದೆ ವಿಜ್ಞಾನಿಯುಂ ಪಡೆದೆ.
ವೇದ ಶಾಸ್ತ್ರಾಭ್ಯಾಸ ನಿಷ್ಣಾತರಂ ಪಡೆದೆ.
ವಾದಿ ವಿದ್ಯಾನಿಪುಣ ವಾಗ್ಮಿಗಳ ನೀಂ ಪಡೆದೆ.
ಗಮಕ ಗಾನ ವಿನೋದ ವಿದ್ವಾಂಸರಂ ಪಡೆದೆ.
ಇತಿಹಾಸವೇತ್ತರಂ ಶಾಸ್ತ್ರ ಸಂಶೋಧರಂ
ಪಡೆದೆ ನೀನೆಲ್ಲರಂ ನಿನ್ನ ಬಳಗಂ ಪ್ಸಿರಿದು.
ಓ ತಾಯೆ! ಸರಸತಿಯೆ! ಕನ್ನಡಿಗರರಸತಿಯೆ!
ಚೆನ್ನ ಮಕ್ಕಳ ಪಡೆದ ತಾಯಿ ನೀನಮ್ಮ.
ನಿನ್ನ ತೇಜದ ಸೊಡರ ಕುಡಿಗಳಾವಮ್ಮ.

ಕಳೆದ ಇಪ್ಪತ್ತೈದು ವರುಷಗಳ ಹಿಂದಿಲ್ಲಿ
ಕನ್ನಡದ ರಾಜ ಋಷಿ ತೆರೆದ ವಿದ್ಯಾಲಯುಂ
ಅವನ ತಪ ಅವನ ಕೃಪೆ ಅವನ ಪುಣ್ಯಂ ಸಂದು
ತನ್ನ ಹುಟ್ಟಿನ ಬೆಳ್ಳಿಯೊಸಗೆ ಹಬ್ಬದೊಳಿಂದು

ಕನ್ನಡ ರಮಾರಮಣ ಯಾದವ ಕುಲೋತ್ತುಂಗ
ನಮ್ಮೊಡೆಯ ಜಯಚಾಮರಾಜೇಂದ್ರನಾಳಿಕೆಯ
ಕರ್ಮ ಬಲದಲಿ ನಿಂದು ಗುಡಿಗಟ್ಟಿ ಮೆರೆಯುತಿದೆ.
ಈ ಮೆರೆತದಲಿ ನಾವು ನಮ್ಮ ತಾಯುಡಿಯಲ್ಲಿ
ನಲಿದಾಡುತಿಹೆವಿಂದು ಹರ್ಷದಿಂದಾಡಿ,
ಹಳೆನೆನಪು ಮರುಕಳಿಸಿ ಹೊಸ ಆಶೆ ಮೂಡಿ.

ಗರಿಮೆಯಲಿ ಹಿರಿಮೆಯಲಿ ಚೆಲುವಿನಲಿ ಚೆದುರಿನಲಿ
ವಿದ್ಯೆಯಲಿ ಬುದ್ಧಿಯಲಿ ಸಿದ್ಧಿ ಸಾಧನೆಗಳಲಿ
ನಯ ವಿನಯ ನೀತಿಯಲಿ ರುಚಿಯ ಸವಿಮಾತಿನಲಿ
ನಿನ್ನ ಮಕ್ಕಳು ನಾವು ನಿನ್ನ ಹಾದಿಯ ನಡೆದು
ನಿನ್ನ ಕೀರ್ತಿ ಧ್ವಜವನೆತ್ತಿ ಹಿಡಿವೆವು ತಾಯೆ.
ಬೆಳ್ಳಿಹಬ್ಬದ ಒಸಗೆ ಹಬ್ಬುವೀ ಬಳ್ಳಿಯಲಿ
ಕುಡಿವೊಡೆದು ದಾಂಗುಡಿಯನಿಟ್ಟು ನನೆಕೊನೆವೋಗಿ
ಸ್ವರ್ಣ ವಜ್ರೋತ್ಸವಗಳಾನಂದ ಕುಸುಮಿಸಲಿ.
ತಾಯ್ ಬಾಳಿ ನುಡಿ ಬಾಳಿ ನುಡಿಯ ಗುಡಿ ಬಾಳಿ
ಚಿರಮಿರಲಿ ತಾಯ್ ನೆಲದ ದೊರೆ ನಮ್ಮನಾಳಿ.

## ವೇದವ್ಯಾಸನಿಗೆ

ನಿನಗಿದೊ ನಮೋ ನಮೋ ಗುರುವೆ ವೇದವ್ಯಾಸ!
ನಿನ್ನ ಪರಿಚಯವಾದುದರಣ್ಯ ಪರ್ವಾಧ್ಯಯನ
ಕಾಲದಲಿ. ಅಲ್ಲಿ ಪಾಂಡವರ ಕಥೆ ಹೆಮ್ಮರನ
ಹೋಲುತಿದೆ. ಉಪಕಥಾವಳಿ ಬಳ್ಳಿ ವಿನ್ಯಾಸ
ಗೊಳ್ಳುತಿದೆ ಸಾಂದ್ರ ವೃತ್ತಾಕಾರವನು ತಳೆದು.
ದ್ವೈತ ಕಾಮ್ಯಕ ವನಗಳದ್ವೈತ ಚಿತ್ರದಲಿ
ಮಸಿ ಬಿದ್ದು, ಮುಖ್ಯ ಕಥೆ ಬಣ್ಣ ಕೆಟ್ಟರು ಕೆಡಲಿ;
ಲೋಕಕರುಹುವ ನೀತಿ ಹಿರಿದೆಂದು ನೀಂ ತಿಳಿದು;
ಧೌಮ್ಯ ಲೋಮಶರಾದಿ ಋಷಿವರರ ಸೂಕ್ತಿಯಲಿ
ವೇದಶಾಸ್ತ್ರಾದಿಗಳಲಿರುವಂಥ ಹಿರಿದಾದ
ತತ್ತ್ವೋಪದೇಶಗಳ ಸಂಗ್ರಹಿಸಿ ಕೊಟ್ಟಿರುವೆ.
ನಾನು ಇದನರಿಯದೆಯೆ ದ್ವೈತ ವನ್ಯದ್ರುಮದ
ಜಟಿಲಿತ ನಿಕುಂಜದಲಿ ದಾರಿತಪ್ಪಿದೆನೆಂದೆ
ಭಾವಿಸಿದೆನಿದನುಪೇಕ್ಷಿಸಿ ಮನ್ನಿಸೈ ಗುರುವೆ.

# ಮಹಾಭಿನಿಷ್ಕ್ರಮಣ

ಕರಾಳ ಇರುಳಿನ ಉನ್ಮಾದದಲಿ
ತಿರೆ ಚಿರ ನಿದ್ರೆಯೊಳೊರಗಿಹುದು.
ನೀಳ ಕರ್ಬಸಿರಲಿ ಸೆರೆಯಾಗಿ
ಹಿರಿಮರ ನಿಂದಿದೆ ತೋಳೆತ್ತಿ.

ಅನಂತ ಯಾತನೆಯಲಿ ಬನಗಾಳಿ
ಚಿತ್ರಹಿಂಸೆಯಲತಿ ಬಳಲಿ
“ ನಿಗೂಢ ತತ್ವರಹಸ್ಯವನಾರೂ
ಭೇದಿಸರೇ ” ಎಂದುಲಿಯುತಿದೆ.

ವಾಯುದೂತಗೆ ಕೇಳಿಸಿತೇನು ?
ಸದ್ದಿಲ್ಲದೆ ನಿಂತನೆ ತಾನು !
“ ನಿಗೂಢ ತತ್ವರಹಸ್ಯವ ನಾನು
ಭೇದಿಸಲೆಂದೇ ಬಂದಿಹೆನು ”

ಸುಧೀರ ಕಂಠದೊಳಿಂತು ತಥಾಗತ—
ನುತ್ತರವೀಯುತ ಮೈಮರೆದು
ಆತ್ಮ ಜ್ಞಾನವನರಸುತೆ ಪೋದಂ
ಸಂಸಾರವ ತಾಂ ಸಲೆ ತೊರೆದು.

ಕೇಳಿಸೀತಾದನಿ ಅಲೆ ಅಲೆಯಾಗಿ
ದೂರ ಮಬ್ಬಿನ ಕಾಡನಲಿ.
ಮಿಂಚಿನ ವೇಗದಿ ವಾಜಿಯನೇರಿ
ಕಣ್ಮರೆಯಾದನು ಸಿದ್ಧಾರ್ಥ.

ಖುರಪುಟ ಕೊನೆಯಲಿ ಕೇಳಿಸದಾಯ್ತು
ಅಗಮ್ಯ ಕಾನನದಲಿ ಮೊಳಗಿ.
ಜಡದ ಸುಷುಪ್ತಿಯನಿರಿಯುತಲಿತ್ತ
ಪೂರ್ವಗಿರಿಯಲಿ ಬೆಳಗಾಯ್ತು.

# ವಿಜ್ಞಾನಿಗೆ

ಓ ದಿವ್ಯ ವಿಜ್ಞಾನಿ! ನಿನ್ನ ಪ್ರತಿಭೋದ್ದೀಪ್ತ
ಗುಪ್ತ ಸಂಶೋಧನೆಯಿನಾದ ಸಂಹಾರಮಂ,
ಪರಮಾಣುಸಿಡಿಮದ್ದಿನತುಳ ಪರಿಣಾಮಮಂ,
ನೆನೆದೆ ನಾಂ ಮೈನವಿರೊಳದ್ದಿದೆಂ ಸಂತಪ್ತ
ನಾಗಿ. ಅಹ! ನಿನ್ನಹಂಕಾರದಲಿ, ತಾರ್ಕಿಕನ
ತಾತ್ವಿಕನ ಕವಿಯ ಮೇಣ್ ಧರ್ಮಸಂಸ್ಥಾಪಕನ
ಶಾಂತಿಯುಪದೇಶ ತಾಂ ಜಲಲಿಪಿಯವೋಲಾಗೆ
ಲೋಕಸೃಷ್ಟಿಗೆ ಸ್ಥಿತಿಗೆ ವಿಲಯಮಂ ಕಾಣಿಸದೆ.
ಆದೊಡೇಂ? ಅಣುಗಳಂ ವಿಶ್ವಕಿರಣಂಗಳಂ
ಮೀರಿರುವ ಪರಶಕ್ತಿಯನ್ನರಿವ ದರ್ಶನಕೆ
ನಿನ್ನೊಳ್ಪಿನೆಲ್ಲಮಲ ಚಿಚ್ಛಕ್ತಿಯಂ ವ್ಯಯಿಸಿ
ಆತ್ಮಸಾಕ್ಷಾತ್ಕಾರದಮೃತದಾನಂದಮಂ
ಪಡೆದೆಯೇಂ? ಅದನುಳಿದ ಈ ಸಿದ್ಧಿ ಬರಿಯ ಹುಸಿ.
ಅದೆ ಋತಂ ಅದೆ ಶಿವಂ ಅದೆ ಜಗದ್ಧಾರಣಂ

# ಮಹಾತ್ಮ ಗಾಂಧಿಗೆ

ಸೂರ್ಯನಂತಗ್ನಿಯಂತಾ ವಿದ್ಯುತ್ತಿಂತಂತೆ
ಹೊನಲಂತೆ ಅಲರಂತೆ ಎಲರಂತೆ ಅರಿಲಂತೆ
ಜೇನಂತೆ ಹಾಲಂತೆ ಪೀಯೂಷವೆಂತಂತೆ
ನಿನ್ನ ನುಡಿ ನಿನ್ನ ನಡೆ ಮಂಗಳ ಮನೋಹರಂ
ಸಾನಂದ ಸುಂದರಂ ಸಂಪೂರ್ಣ ಶಂಕರಂ.
ಅಂತೆಯೆ ಮಹಾತ್ಮನೆಂದಂಜಲೀಕೃತನಾಗಿ
ನಿನ್ನ ಪದ ಪಂಕಜಕೆ ಮಣಿಯುವೆ ಶಿರಂ ಬಾಗಿ.
ಸತ್ಯಮನಹಿಂಸೆಯಂ ಸ್ವಾತಂತ್ರ್ಯ ಪ್ರೀತಿಯಂ
ಭಾರತೀಯರಿಗಿತ್ತೆ ಶಾಂತಿಯಂ ದಾಂತಿಯಂ.
ದುಷ್ಟ ಜನ ಶಿಕ್ಷಣಕೆ ಶಿಷ್ಟ ಜನ ರಕ್ಷಣಕೆ
ಮೇಣೀ ಧರಿತ್ರಿಯಲಿ ಧರ್ಮಸಂಸ್ಥಾಪನಕೆ
ಶ್ರೀಕೃಷ್ಣ ಜರತುಷ್ಟ್ರ ಜಿನ ಮಹಮ್ಮದ ಬುದ್ಧ
ಕ್ರಿಸ್ತರಂತವತಾರ ತಾಳಿರುವ ನಿನಗಿದೋ
ಜಯಮಕ್ಕೆ ಒಳಿತಕ್ಕೆ ಮೇಣ್ ನಿತ್ಯ ಶುಭಮಕ್ಕೆ.

## ಶ್ರೀನಿವಾಸರ ಮಲಾರವನ್ನು ಓದಿ

ಶ್ರೀನಿವಾಸರೆ ನೀವು ರಚಿಸಿದ ಮಲಾರವನು
ಓದಿ ಮುಗಿಸಿಹೆನಿಂದು ಹರುಷದುತ್ಸಾಹದಲಿ.
ಅದರ ಬಗೆ, ಭಾವ ಹೇಳುವ ರೀತಿ, ಮಾತಿನಲಿ
ನೀತಿಯನು ಕೋದು ಬರೆದಿಹ ಛಂದ, ಎಲ್ಲವನು
ಗ್ರಹಿಸಿ ವಿಸ್ಮಯವಾಂತೆ ಸಂತಸದೊಳೋಲಾಡಿ.
ಶಾರದೆಯು ನಿಮಗೊಲಿದು ನಿಮ್ಮ ಕೊಳಲನು ಮಾಡಿ
ತಾನುಸಿರನೂದುತಿರೆ ಹಾಡಿದಿರಿ ನೀನಂತೆ.
ನಮ್ಮ ಹೊಸಗನ್ನಡದ ಕಾವ್ಯನಂದನ ವನದ
ಮನಸೆಳೆವ ಮಂದಾರದರಳಂತೆ ಮುದ್ದಾದ
ನಿಮ್ಮ ಕೃತಿಯರಳುತಿಹುದೆಮ್ಮ ನಾಡಿನ ಪುಣ್ಯ.
ಹಿರಿಯರಲಿ ಹಿರಿಯನೆಂದೆನಿಸಿರುವ ಓಗಣ್ಯ !
ನಿಮ್ಮೊಳಿಂದುಗಮಿಸಿದ ಅಷ್ಟ ಷಟ್ಪದಿ ರಚನೆ
ಕನ್ನಡದ ಕವಿತೆಯಲಿ ಹೊಚ್ಚಹೊಸ ಮಾರ್ಗವೆನೆ
ಹೊಗಳಿಕೆಯ ಮಾತಲ್ಲ, ಸತ್ಯವನೆ ಪೇಳ್ದಂತೆ.

# ಭಾರತದ ವಿದ್ಯಾರ್ಥಿಗೆ

ಆಸೇತುಹೈಮಾಚಲಂಬರೆಗಮೊಂದಾಗಿ
ರಾಜಕೀಯೋದ್ಧೂತ ವಿಲಯಾಗ್ನಿಯುರಿ ಹೊತ್ತಿ
ದಿಗ್‌ದಿಗಂತಂ ಸುತ್ತಿ ಜೀವಕೋಟಿಯ ಮುತ್ತಿ
ನಿರ್ನೆರಂ ದಹಿಸುತಿರೆಯಿರೆ ತಾನೆ ತಾನಾಗಿ;
ಭಾರತ ಸ್ವಾತಂತ್ರ್ಯ ರಣಯಜ್ಞದಾ ಉರಿಗೆ
ಕ್ರಾಂತಿ ಕಾಳಿಯ ಚಂಡಿಯುದ್ದಂಡದಾಹುತಿಗೆ
ನಿನ್ನಮೃತ ವಿದ್ಯೆಯಂ ಸತ್ಕಲೆಯ ಸಿದ್ಧಿಯಂ
ನಿನ್ನೆದೆಯ ರಕ್ತಮಂ ತ್ರಾಣಮಂ ಪ್ರಾಣಮಂ
ಬೇಳ್ದ ನೀನಾತ್ಮ ಸಂತೋಷದಿಂದೋರಂತೆ.
ಜನ್ಮಭೂಮಿಯ ಋಣವ ತೀರ್ಚಿ ಮೋಕ್ಷಂ ಬೆತ್ತೆ.
ಭಾರತದ ಬಿಡುಗಡೆಗೆ ಹೋರಾಡಿ ಅಸು ತೆತ್ತೆ.
ಇತಿಹಾಸ ಲೇಖಕಂ ನಿನ್ನೀ ಚರಿತ್ರೆಯಂ
ರಕ್ತಾಕ್ಷರಂಗಳಲಿ ಬರೆದು ವಿಸ್ತರಿಸುವಂ.
ಪಾಠಕಂ ವಾಚಿಸುವನದನಶನಿ ರವದಂತೆ.

## ವೆಂಕಟಾಚಾರ್ಯರಿ

ನಮ್ಮ ಬಂಕಿಮಚಂದ್ರ ಓ ವೆಂಕಟಾಚಾರ್ಯ!
ಕನ್ನಡದ ನುಡಿನೆಲದಿ, ವಂಗ ಕಾದಂಬರಿಯ
ಕಾವ್ಯರಸ ಮಕರಂದ ಸುರಿವ ಮಧುಮಂಜರಿಯ
ಮಂಜುಳ ರಸಾಲತರು ರಾಜಿಯಂ; ಸೌಂದರ್ಯ
ಲಕ್ಷ್ಮಿಯ ವಿಹಾರೋಪವನ ವೀಥಿಯಂ: ಸೃಜಿಸಿ
ಪಾಠಕ ಭ್ರಮರಾಳಿಗಾಮೋದಮನ್ನಿತ್ತೆ.
ರಸಿಕ ಕಳಕಂಠಗಳಿಗಮೃತಾನ್ನಮನ್ನಿತ್ತೆ.
ರಮ್ಯ ಅದ್ಭುತ ಕಥೆಯೊಳಪ್ರತಿಮ ಪಾತ್ರಮಂ
ರಚಿಸಿ ಸುಂದರ ಕೃತಿಯ ಫಲವ ಮೇಣಿಮಗಿತ್ತೆ.
ನಿನ್ನ ಕಾದಂಬರಿಯ ಚೂತ ಕಾಂತಾರಮಂ
ಚರಸಿ ಸಂಚರಿಸಿ ನಾನಾನಂದ ವಶನಾದೆ.
ಚಿತ್ತ ಚೈತ್ರೋತ್ಸವದ ನಂದನಾರಾಮದಲಿ
ಗ್ರಹಿಸಿ ಸಂಗ್ರಹಿಸಿ ನಾಂ ಸಂಭೃತ ಶ್ರೀಯಾದೆ.
ಶಂಕರ ಭಯಂಕರ ವಿನೋದಾನುಭವಿಯಾದೆ.

## ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರಿಗೆ

ತನ್ನ ಮನೆತನದವರ ಪ್ರಾಚೀನರಿತಿಹಾಸ-
ವನು ಹೇಳಿ, ಅವರ ಶೌರ್ಯೌದಾರ್ಯ ಸುಗುಣಗಳ
ತನ್ನವರಿಗರುಹುತ್ತೆ, ಮತ್ತಂತೆ ಕಥೆ ಕೇಳ-
ಲಾಶಿಸುವ ಮಕ್ಕಳನು ಮುದ್ದಿಸುತೆ, ಹಾಸ್ಯರಸ
ಸೂಸುತಿಹ ನಗೆಗಡಲ ತೆರೆ ತೊಟ್ಟಿಲಲಿ ತೂಗಿ;
ಆನಂದದಲಿ ತಾನು ಉರುಳಿ ಬರುವಿರುಳಿನಲಿ
ನಿದ್ದೆಹೋಗುವ ಮನೆಯ ಅಜ್ಜಯ್ಯನಂದದಲಿ
ನೀವೆಮಗೆ ನಮ್ಮ ಪೂರ್ವಜರಮರ 'ಕವಿಚರಿತೆ'—
ಯನ್ನೊರೆದು 'ನಗೆಗಡಲ' ಕಥೆ ಹೇಳಿ ರಸದೊರತೆ—
ಯನು ಸೂಸಿ ಪೆರ್ಮನಡಿದಾವರೆಯ ಸೇರಿದಿರೆ!
ವಿದ್ಯೆಯುಂ ವಿನಿಯಮುಂ ರಾಜಮರ್ಯಾದೆಯುಂ
ಪಡೆದಮಳ ಯಶವಾಂತ ಕನ್ನಡ ಪಿತಾಮಹರೆ!
ನಿಮ್ಮ ನೆನಹಿನ ದೀಪವೆಮ್ಮೆದೆಗೆ ಬೆಳಕಾಗಿ
ನಾಡ ಸೇವೆಗೆ ದಾರಿ ತೋರಲೆಮಗಣಿಯಾಗಿ.

## "ಶ್ರೀ" ಯವರಿಗೆ ಬಾಷ್ಪಾಂಜಲಿ

ಓವೊ ನಮ್ಮಾಚಾರ್ಯ ಓವೊ ನಾಡಿನ ಸೂರ್ಯ
ಓವೊ ಕನ್ನಡ ತಾಯ ಹಿರಿಯ ಸತ್ಪುತ್ರ
ಓವೊ ನಮ್ಮಕ್ಕರೆಯ ಸಿರಿಯ ವರ ಗುರುದೇವ
ಓವೊ ನಮ್ಮೀನಾಡ ಪ್ರೇಮ ಸತ್ಪಾತ್ರ!
ಓವೊ ಕರುನಾಡವರ ಹೊಸಕುಲದ ತಲೆವಣಿಯೆ
ಓವೊ ನಮ್ಮೀನುಡಿಯ ದಿವ್ಯ ಸತ್ಕೀರ್ತಿ.
ಓವೊ ಹೊಸಗನ್ನಡದ ಕಾವ್ಯದೋಂಕಾರವೇ
ಓವೊ ನಮ್ಮೀನೆಲದ ಪುಣ್ಯಮೂರ್ತಿ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿವಿಡಿದು.

ಶ್ರೀಕೃಷ್ಣನೊಲುಮೆಯಲಿ ನಲಿದು ನೆಮ್ಮದಿವಡೆದು
ಮನವುಬ್ಬಿ ಹಸುರಾದೆ ನಮಗೆ ನೆಳಲಾದೆ;
ನಿನ್ನೊಲುಮೆ ಪೊನ್ನುಡಿಯ ಸಿರಿತೊಡವುಗಳ ತೊಡಿಸಿ
ಕನ್ನಡವ ಸಿಂಗರಿಸಿ ನಮಗೆ ಗುರುವಾದೆ.
ಕನ್ನಡ ಯಶೋಗಾನದುಲಿಯ ಜೇನಿಂಚರವ
ನುಡಿಯಿಸುವ ಶ್ರೀವಾಣಿ ಕೈವೀಣೆಯಾದೆ;
ಕನ್ನಡಮ್ಮನ ತಲೆಯ ವಯಿರುಮುಡಿ ಕಿಡಿಯಾದೆ
ಬೆಳಬೆಳಗಿ ಹೆಸರಾದೆ ನಮಗೆ ಬೆಳಕಾದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಆರ್ಯ ಋಷಿಗಳ ಪುಣ್ಯರಸತೀರ್ಥದಲಿ ಮಿಂದೆ
ದಿವ್ಯದರ್ಶನ ಕಂಡೆ ಹೃತ್ ಶುದ್ಧನಾದೆ.
ಧರ್ಮ ಸಂಸ್ಥಾಪಕರ ತತ್ವ ಮಂದಾಕಿನಿಯ

ಅಮೃತ ಜಲದಲಿ ನಾಂದೆ ಚಿತ್ ಸುಭಗನಾದೆ.
ವಿಶ್ವಕವಿಗಳ ಮಹಾ ಕಾವ್ಯಗಂಗಾ ಲಹರಿ
ನಿನ್ನಾತ್ಮವಂ ಮಿಸಿಸೆ ಪರಿಪೂತನಾದೆ.
ಅಂತೆ ರಸಋಷಿಯಾದೆ ರಸಚಕ್ರಿ ಸೀನಾದೆ
ಲೋಕ ನಾಯಕನಾದೆ ಲೋಕ ಗುರುವಾದೆ.
ಓವ್ರೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಷೇಕ್ಸ್‌ಪಿಯರ್ ನಿನಗಮೃತ ಷೆಲ್ಲಿ ನಿನಗಾವೋದ
ಪಂಪ ರನ್ನರ ಕಾವ್ಯ ನಿನ್ನೊಲುಮೆ ಹುಚ್ಚು.
ಸಾಫೋಕ್ಲೀಸ್ ಈಸ್ಕಲೀಸ್ ನಿನ್ನ ಆತ್ಮಾನಂದ
ವೀರನಾರಾಯಣನ ಕೃತಿ ನಿನಗೆ ಕೆಚ್ಚು.
ಕೋಲ್‌ರಿಜ್ ವರ್ಡ್ಸ್‌ವರ್ತರವುಳ ಕೃತಿ ನಿನಗಿನಿದು
ಬಸವ ತಿರುವಳ್ಳುವರ್ ನಿನ್ನೆದೆಗೆ ತಂಪು.
ಆರ್ನಾಲ್ಡ್ ಮಿಲ್ಟನ್ನರಂತೆ ನಿನಗತಿ ಸೊಂಪು
ಹರಿಹರನ ರಾಘವನ ಕವಿತೆ ನಿನಗಿಂಪು.
ಓವ್ರೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಹೊನ್ನ ಹರಿವಾಣದಲಿ ಹಾಲಾಹಲಂ ತುಂಬಿ
ಬಳಿ ಬಂದ ವಿಧಿಯು ನೀಂ ಸ್ವಾಗತಿಸಿದೆ.
ಕಾವ್ಯ ಶಾರದೆಯೊಲಿದು ರುದ್ರ ವೀಣೆಯ ಮಿಡಿದು
ಸಿಡಿಲ ದನಿಯಲಿ ಹಾಡಿ ಮಿಂಚನೆಸೆದು
ಕೂರ್ಪಾಗಿ ಬೆಳಗಿ ತಾನಿಳೆಗಿಳಿದು ಬಳಿಗೆ ಬರೆ
ಅವಳನಾರಾಧಿಸಿದೆ ಆದರಿಸಿದೆ.
ಅವಳ ಸಾಕ್ಷಾತ್ಕಾರದಾನಂದದುಕ್ಕೇರಿ
ಹಾಡಿ ಆಡಿದೆ ನಲಿದೆ ರಸಪುರುಷನಾದೆ.
ಓವ್ರೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ತುಳಸಿದಳದೊಡನಿರುವ ತುಂಗೆ ನೀರಿಂತಂತೆ
ಮರುಗದೊಡವೆರೆದಿರುವ ಮೊಲ್ಲೆಯರಳಂತೆ
ಸಿಗುರಿಸೆದ ಕಬ್ಬಂತೆ ಕಾವಳಿದ ಹಾಲಂತೆ
ಹುತ್ತದಿಂದದೆ ಕಿತ್ತ ಕೋಲ್ ಜೇನಿನಂತೆ
ನಿನ್ನ ನಡೆ ನುಡಿ ಸೊಂಪು ಭಾವದರ್ಥವು ಪೆಂಪು.
ಅತಿಸರಳ ಅತಿಸಹಜ ಅತಿಸುಭಗಕೃತಿಯು.
ನಿನ್ನ ಕನ್ನಡ ಕೂರ್ಪು ನಿನ್ನ ಕನ್ನಡದಾರ್ಪು
ಆ ತೆಳ್ಪು ಆ ಮೆಲ್ಪು ಎಲ್ಲ ಅನುಪಮವು.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಕನ್ನಡದ ಬಾವುಟವನೆತ್ತರಕೆ ಹಾರಿಸಿದೆ
ಕನ್ನಡದ ಸತ್ವವನು ಮತ್ತೆ ಘೋಷಿಸಿದೆ.
ಕನ್ನಡದ ಕೀರ್ತಿಯನು ಧವಳಗಿರಿಗೇರಿಸಿದೆ
ಕನ್ನಡದ ಮಹಿಮೆಯನು ಮೇಲೆತ್ತಿ ಹಿಡಿದೆ.
ಕನ್ನಡದ ತೀರ್ಥಗಳ ಕನ್ನಡ ಕ್ಷೇತ್ರಗಳ
ಪ್ರತ್ಯಕ್ಷದಲಿ ಕಂಡೆ ಭಕ್ತಿಯಲಿ ಮಣಿದೆ.
ಕನ್ನಡದ ಹೊಂದೇರನೂರೂರಿಗೆಳತಂದೆ.
ಕನ್ನಡಕೆ ಕೊಡುಗೈಯ ಕಾಣ್ಕೆಗಳ ತಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಕನ್ನಡಂ ಸೊಂಪೆಂದೆ ಇಂಪೆಂದೆ ಪೆಂಪೆಂದೆ
ಗೆಲುವೆಂದೆ ಚೆಲುವೆಂದೆ ಸಿರಿಯೊಲುಮೆಯೆಂದೆ.
ಕಬ್ಬೆಂದೆ ಮಾವೆಂದೆ ಪಾಲೆಂದೆ ಜೇನೆಂದೆ
ಮಕರಂದವೆಂದೆ ಮೇಣಮೃತ ರಸವೆಂದೆ.
ಕನ್ನಡಂ ತವರೆಂದೆ ಕನ್ನಡಂ ತಾಯೆಂದೆ

ಕನ್ನಡಂ ನಮ್ಮುಸಿರ್ ನಮ್ಮಾತ್ಮವೆಂದೆ.
ಚಕ್ರವರ್ತಿನಿಯೆಂದೆ ಸಾಮ್ರಾಜ್ಞಿಯವಳೆಂದೆ
ನಮ್ಮ ಆರಾಧನೆಯ ದೈವವೆಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಋತವೊಂದೆ ಗೆಲ್ಲುವುದು ಅನೃತ ಗೆಲ್ಲದು ಎಂದೆ
ಅಮೃತವೆನೆ ವಿದ್ಯೆಯೆ ಅವಿದ್ಯೆಯಲ್ತೆಂದೆ.
ವಿಶ್ವ ಭಾರತಿ ಶರಣು ಕಿರುತೀರ್ಥವಲ್ಲೆಂದೆ
ಸರ್ವ ಜೀವಕು ಮುಕ್ತಿ ಸಲೆ ದೊರೆಯಲೆಂದೆ.
ದೇವರೊಳ್ ಪಗೆವವರ ಕಾಳಗಂ ನಿಲಲೆಂದೆ
ಜ್ಞಾನ ಧರ್ಮಂಗಳಿಂದಿಳೆತಣಿಯಲೆಂದೆ.
ಸಾವುದೆಲ್ಲಾ ಸತ್ತು ಬಾನಾಳ್ಕೆ ಪೂಣ್ಗೆಂದೆ
ಕನ್ನಡಿಗರುಸಿರಾಗಿ ನುಡಿ ಬಾಳಲೆಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಕನಿಕರಿಸಿ ನೀಂ ಕರೆದ ಕರುಣಾಳು ಬೆಳಕಿಂಗೆ
ಕೈಮುಗಿದು ಬೇಡುವೆಂ ಮೌನದಿಂ ಬಾಗಿ.
ನೆಮ್ಮುಗೆಯ ನಾಡಿಂಗೆ ಸಚ್ಚಿದಾನಂದಕ್ಕೆ.
ನಡೆದ ನಿನ್ನಾತ್ಮಕ್ಕೆ ಸದ್ಗತಿಯದಕ್ಕೆ.
ನಿನ್ನ ಜೀವನ ದೀಕ್ಷೆ ನಮಗೆ ದೀವಿಗೆಯಾಗಿ
ನಮ್ಮ ಬಾಳ್ ಕನ್ನಡದ ಸೇವೆಯಲಿ ಸಲ್ಗೆ.
ನಿನ್ನ ಜೀವನ ಮಂತ್ರ ನಿನ್ನ ಜೀವನ ತಂತ್ರ
ನಮ್ಮೆದೆಗಳಂ ಬೆಳಗಿ ಕನ್ನಡಂ ಗೆಲ್ಗೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

# ಕಲ್ಪನಾ ವಿಲಾಸ

ಪಡುವೆಟ್ಟಿನಾಚೆಯಲಿ ಹಗಲ ಕಡೆಗಾಲದಲಿ
ಸಂಧ್ಯೆ ಸಾಗರದಂತೆ ಮೊರೆದುರುಳುತಿತ್ತು.
ಕದರಿದೋಕುಳಿಯಾಗಿ ಹರಿದು ಬಾಂದೊರೆ ಬಂದು
ಬಣ್ಣಗಡಲನು ನಡುವೆ ಸಂಧಿಸಿತ್ತು.
ಭರ ಬಂದ ಕಡಲಂತೆ ಕಿರಿಮುಗಿಲ ತೆರೆಯೆದ್ದು
ಥಳಥಳನೆ ಹೊಳೆದು ಹೊಗರೇಳುತಿತ್ತು
ತೆರೆಮರೆಯೊಳತಿದೂರದಾಚೆಯಲಿ ಹೊಳೆದಿತ್ತು
ಕಡಲ ಕಂಬದ ದೀಪದಂತೆ ರವಿಬಿಂಬ.

ಸಿಂಧೂರ ಸಾಗರದ ಚಕ್ರವರ್ತಿನಿಯಂತೆ
ಮೆರೆವ ಸಂಧ್ಯಾದೇವಿ ತನ್ನ ಸಖಿ ಕಳುಹಿ,
ಮುನ್ನೀರಿನಾಟದಲಿ ಮನವಾರೆ ನಲಿಯಲಿಕೆ
ತನ್ನೊಡನೆ ಬರಲೆನ್ನ ಕರೆದಳಂದು.
ಪಡುಗಡಲ ಕೆಂದೊರೆಯ ಮುಗಿಲ ದೋಣಿಯನೇರಿ
ಸಂಧ್ಯೆಗಭಿಮುಖವಾಗಿ ಹುಟ್ಟು ತೆಗೆದು,
ಅವಳ ಸಾನ್ನಿಧ್ಯವನು ಸೇರುವಾತುರದಿಂದೆ
ದೋಣಿಯನು ದೂಡಿದೆನು ಕಡಲ ಮೇಲೆ.
ಪುಟ್ಟ ಚಿನ್ನದ ದೋಣಿ ಅದಕೆ ರನ್ನದ ಹುಟ್ಟು
ಮೇಲೆ ಮುತ್ತಿನ ಛತ್ರಿ ಮಿನುಗುತಿತ್ತು
ಹೊಂಬೆಳಗು ಕೆಂಬೆಳಗು ಮಿಶ್ರವರ್ಣದಿ ಕರಗಿ
ಸುತ್ತಿತ್ತ ಸಂಭ್ರಮವ ಸೂಸುತಿತ್ತು.
ತೆರೆಯುಬ್ಬಿ ಬರುತಿರುವ ಕಡಲ ಮೇಲಿಂದುರುಳಿ
ಸುರಭಿಯುತ ತಂಬೆಲರು ತೀಡುತಿತ್ತು.
ಮೋಡಗಳ ಹುಡುಗಿಯರು ಹಾಡುಗಳ ಹಾಡಿದರು

ಪ್ರಸ್ಥಾನ ಕಾಲದಲಿ ಶುಭವ ಬಯಸಿ.
ಕಡಲ ಕನ್ಯೆಯರೆಲ್ಲ ಸಂತಸದೊಳಿದಿರು ಬಂ—
ದಾರತಿಯ ನೆತ್ತಿದರು ಸೇಸೆ ತಳಿದು.
ಕೇಣಿಗೊಂಡೇಳುತಿಹ ತೆರೆಯ ತೂಗುಯ್ಯಲಿಯೊ—
ಳೊಲಿದಾಡಿ ತೂಗಾಡಿ ದೋಣಿ ಸಾಗಿತ್ತು.
ಅವಳೂರ ಸೇರಿದೆನು ಅವಳೊಲವ ಹಾರಿದೆನು
ಅವಳ ಬಳಿ ನನಗಾವುದಿನ್ನು ಕೊರತೆ.
ಗಂಧರ್ವಗಾನ ಯಕ್ಷರ ಕುಣಿತ ಅಪ್ಸರೆಯ—
ರಾಲಾಪ ಕಿನ್ನರರ ತಾಳಮೇಳ.
ರಾಗಮಾಲಿಕೆಗಳನು ನುಡಿವ ರಾಗಿಣಿ ರಾಣಿ
ಅವಳೆದುರೆ ಕುಳಿತಿರುವಳದೊ ಮಧುರ ವಾಣಿ.
ಅವಳ ಸುತ್ತಲು ನಿಂದ ಪರಿವಾರ ದೇವಿಯರು
ರಾಣಿಯುಲಸಿಕೆಗಳನು ಪರಿಹರಿಸುವವರು,
ಚಾಮರ ಕನ್ನಡಿ ಕಳಶ ಬಾಚಣಿಗೆ ಹಿಡಿದವರು
ಗಂಧ ಕಸ್ತೂರಿಗಳ ತಿಲಕವಿಡುವವರು,
ಕುಸುಮ ಹಾರವ ಹಿಡಿದ ನಿಡುಜಡೆಯ ನಾರಿಯರು
ಗೆಜ್ಜೆ ಘುಲಿರೆನುತಿರುವ ಸೆಜ್ಜೆವನೆಯುವರು,
ಇಂದ್ರನಮರಾವತಿಯ ಸೈರಂಧ್ರಿಣಿಯರಂತೆ
ಸಾಲುಗೊಂಡೆದುರಿನಲಿ ನಿಂತ ರಮಣಿಯರು.
ಮುಗುಳು ನಗೆಯುವರ ಬಗೆ ಚಿರ ವಿನೂತನವಾಗೆ
ಅವರಾಟ ಪಾಟಗಳಿಗಂದು ಬೆರಗಾಗೆ;
ರಾಣಿಯರು ಚೇಟಿಯರು ಕೆಳದಿಯರು ಎಲ್ಲರೂ
ಸಂಧ್ಯೆಯೊಬ್ಬಳನುಳಿದು ಮಾಯವಾಗೆ;
ಸಂಧ್ಯೆ ಸಡಗರದಿಂದಲೆನ್ನ ತುಟಿಗಳಿಗಂದು
ಸಂಧಿಸಿದ ನಿಶೆ ತುಂಬಿದಾ ಮಧುರ ಪಾತ್ರೆ
ಸುಧೆಯುಣಿಸನೂಡುತಿರೆ ವ್ಯೋಮನವ ಮರೆಯಿಸಿರೆ
ಲೀಲೆಯಲಿ ಕಳೆದಿತ್ತು ಯಾನ ಯಾತ್ರೆ.

ಮೈಮರೆತು ಮನಮರೆತು ಮತ್ತೇರಿ ಮಲಗಿರಲು
    ಸಂಧ್ಯೆ ಜಾರಿದಳಯ್ಯೊ ಜಾರಿಣಿಯ ತೆರದಿ.
ಮುಂದೊಮ್ಮೆ ಕಣ್ದೆರೆದು ನೋಡಿದೆನು ಬೆದರಿದೆನು
    ದೋಣಿ ಬಾದಣಗೊರೆದು ನೀರು ತುಂಬಿತ್ತು.
ಎಲ್ಲಿ ರನ್ನದ ಹುಟ್ಟು ಎಲ್ಲಿ ಮುತ್ತಿನ ಛತ್ರಿ
    ಕಡೆಗಿನಿತು ಕಹಿಯಾಯ್ತು ಸಂಜೆ ಮುತ್ತು.
ಹುಚ್ಚೆದ್ದ ಬಿರುಗಾಳಿ ಭೋರಿಡುವ ತೆರೆಯೋಳಿ
    ಕಣ್ಣು ಕಾಣದ ಮಹಾಕಾಳರಾತ್ರಿ.
ಗತಿಯಾರು ಮತಿಯಾರಪಾರವಾರಿಧಿಯಿಂದ—
    ಲಾರೆನ್ನ ಉಳುಹುವರು ಎಲ್ಲಿ ಧಾತ್ರಿ !
ಎಳಗೂಸಿನಂದದಲಿ ಕೂಗಿ ಕಿಟ್ಟನೆ ಕಿರಚಿ
    ಕಾಳಿರುಳ ಕಡಲಿನಲಿ ಬೀಳಬೇಕೆ !
ಮುಳುಗಿದೆನೊ ತೇಲಿದೆನೊ ನನಗೆ ಎಚ್ಚರವಿಲ್ಲ
    ಮುಂದಾದುದನು ನಿಮಗೆ ಹೇಳಲೇಕೆ.

ಇರುಳೆಲ್ಲ ನನಗಾಗಿ ಕಾದು ಕೃಶಳಾಗಿದ್ದ
    ಚಂದಿರೆಯ ಮಡಲಿನಲಿ ನಾನು ಮಲಗಿದ್ದೆ.
ಕ್ಷಮಿಸೆನ್ನ ಶಶಿದೇವಿ ನಿರಪರಾಧಿಯು ನಾನು
    ಇನ್ನೊಮ್ಮೆ ಮರುಳಾಗೆ ಸಂಧ್ಯೆಗೆನುತಿದ್ದೆ.
ನನ್ನ ಬಾಳಿನ ಗೃಹಿಣಿ ಮಿಡಿದ ಕಣ್ಣೀರಿನಲಿ
    ನನ್ನ ಭಾಗ್ಯೋದಯದ ಉಷೆ ಮಿಂದು ಬಂದು,
ತರುಣಾರುಣೋದಯದ ಮುಂಬೆಳಗಿನೋಲಗದೊ–
    ಳಾರತಿಯ ಬೆಳಗಿದಳು ಸೇಸೆ ತಳಿದು.

# ಪೂಜೆ

ಘನವಂತನೆದುರಿನಲಿ ಘನರು ನಾವೆಂದೆಣಿಸೆ
ಮನವೊಲಿದು ಬಂದಿಹೆವು ಪೂಜೆಗೆಂದು.
ಮಹಿಮವಂತನ ಮುಂದೆ ಮಹಿಮರಾವೆಂದೆನಿಸೆ
ಮಣಿದು ಓಲೈಸಲೆಂದೈತಂದೆವಿಂದು

ಹಿರಿಯರಲಿ ಹಿರಿಯ ತಾನೆಂದೆನಿಸಿ ಮೆರೆದಿರುವ
ಗುರುವರನ ಸೇವಿಸಲು ಬಂದಿರುವೆವಿಂದು.
ಕಿರಿಯರಲಿ ಹಿರಿಯತನದರಿವನೊಡಮೂಡಿಸುವ
ಪರಮನಾರಾಧನೆಗೆ ನೆರೆದಿರುವೆವಿಂದು.

ನುಡಿದಂತೆ ನಡೆಯುವೀ ಅಕಳಂಕ ಮೂರುತಿಯ
ಅಡಿಗೆರಗಿ ನೇಮವನು ಪಡೆಯಲೆಂದು
ಲೋಕಸೇವೆಯ ಭರದೆ ತನ್ನ ಸುಖವನು ತೊರೆದ
ಯೋಗಿವರನಡಿಗಳಲಿ ನಮಿಸಲೆಂದು

ಪ್ರೇಮ ಮಂದಾಕಿನಿಯ ದಿವ್ಯನದಿಯುದಕದಲಿ
ಮಿಂದವನ ಮುಂದೆ ನಾವಿಂದು ನಿಂದು
ಪ್ರೇಮ ಪೂರಿತರಾಗಿ ಸಕಲ ಜೀವಂಗಳನು
ಪ್ರೇಮದಿಂ ನೋಳ್ಪೊಂದು ಬಗೆಗೆ ಸಂದು.

# ರಾಜರಾಜೇಶ್ವರಿಗೆ

ಓ ಮಹಾಶ್ರೀಮಾತೆ ! ಓ ಅಮೃತ ಸಹಜಾತೆ !
ಕ್ಷೀರಸಾಗರ ತನಯೆ ಪುರುಷೋತ್ತಮ ಪ್ರಿಯೆ
ರಾಜರಾಜೇಶ್ವರಿಯೆ ರಾಜೀವಲೋಚನೆಯೆ
ಭಕ್ತಜನ ಸಂಪ್ರೀತೆ ಭುವನೈಕ ಸಂತ್ರಾತೆ
ರಮಣೀಯ ಗುಣನಿಲಯೆ ರಮೆಯೆ ಓ ಇಂದಿರೆಯೆ
ಸರಸಿಜಾಲಯೆ ಸದಯೆ ಸರಸೀರುಹಾನನೆಯೆ !
ನಿನ್ನ ಪದ ಪಂಕಜಶ್ರೀಯನಾರಾಧಿಸುವೆ.
ನಿನ್ನ ಸಂಸೇವಿಸುವೆ ನಿನ್ನನೆ ಉಪಾಸಿಸುವೆ.
ಕ್ಷುಧೆಯಂ ಪಿಪಾಸೆಯಂ ಜ್ಯೇಷ್ಠೆಯನಲಕ್ಷ್ಮಿಯಂ
ಅಶುಚಿಯನಮಂಗಲಮನಾಲಸ್ಯಮಂ ಮೇಣ—
ನಾರೋಗ್ಯಮಂ ಮತ್ತೆ ದಾರಿದ್ರ್ಯಮಂ ಮಾಣ—
ದಿಂತೀ ಅನಿಷ್ಟ ಶತಮಂ ನೀಗಿ ಶಾಂತಿಯಂ
ತುಷ್ಟಿಯಂ ಪುಷ್ಟಿಯಂ ಆಯುರಾರೋಗ್ಯಮಂ
ಈಯೆಂದು ಬೇಡುವೆಂ ಮತ್ತೆ ಐಶ್ವರ್ಯಮಂ.

# ವಿಶ್ವಮಾಯೆ

ಕಳೆಗುಂದಿ ಬಯಲಾದ ತಿಳಿಬಾನಿನಂಗಳವು
ತುಂಬುವುದು ತುಳುಕುವುದು ತಿಂಗಳುದಿಸೆ.
ಮೌನದಲಿ ಕೊರಗುತಿಹ ನೀರವ ನಿಸರ್ಗದಲಿ
ಗಾನವಾವರಿಸುವುದು ತೇನೆಯುಲಿಯೆ.
ಕಡಿದಾದ ಬೆಟ್ಟವನು ಹತ್ತಿ ಮೈ ಬೆವರಿಳಿಯೆ
ಮನ ಮಾರುವೋಗುವುದು ಗಾಳಿ ಸುಳಿಯೆ.
ಮೋಡ ದಟ್ಟೈಸಿರುವ ಮಳೆಯ ದುರ್ದಿನಗಳಲಿ
ಹೆದ್ದಾರಿ ಕಾಣುವುದು ಮಿಂಚು ಹೊಳೆಯೆ.
ಜೀವನೋಲ್ಲಾಸವನು ಚಣಚಣಕೆ ತುಂಬಲೆನೆ
ವಿಧಿಗೈದ ಮಾಟವಿದು ವಿಶ್ವಮಾಯೆ.

# ನಿನ್ನ—ನನ್ನ ಆನಂದ

ಮುಂಗಾರ ಮಳೆ ಸುರಿಸಿ ಭೋರೆನುವ ತೊರೆ ಹರಿಸಿ
ಮರಳ ಮನೆಗಳ ಕೊಚ್ಚುವಾನಂದ ನಿನಗಿರಲಿ.
ಮಳೆ ನಿಂತಿತೆಂದಾನು ಭ್ರಮಿಸಿ ಮರಳಲಿ ಮತ್ತೆ
ಮನೆ ಕಟ್ಟುವಾನಂದವಿರಲಿ ನನಗೆ.

ಮಧುಮಾಸ ಬಂದಿತೆನೆ ನರುಗಂಪು ಸೂಸಿತೆನೆ
ಚೆಲುವು ಹೂಗಳ ಬಿರಿಸುವಾನಂದ ನಿನಗಿರಲಿ.
ಅರಳಿದರಳನು ಕೊಂಡು ಪರಿಮಳವ ಸವಿದುಂಡು
ತುಟಿಗೊತ್ತುವಾನಂದವಿರಲಿ ನನಗೆ.

ಬೆಳುದಿಂಗಳಿರುಳಿನಲಿ ಹಾಲು ಹೊಳೆಯನು ಹರಿಸಿ
ಜಗವ ಧವಳಿಸುವಂದದಾನಂದ ನಿನಗಿರಲಿ.
ಆ ಹಾಲುಗಡಲಿನಲಿ ಮುಳುಗಿ ಮೈಮನ ಕರಗಿ
ಸೊಗವ ಸವಿವಾನಂದವಿರಲಿ ನನಗೆ.

ವಿವಿಧ ಸೃಷ್ಟಿಯ ಸೃಜಿಸಿ ವಿವಿಧ ರೂಪದೊಳಿರಿಸಿ
ಮನವ ಸೆಳೆದೆಳೆಯುತಿರುವಾನಂದ ನಿನಗಿರಲಿ.
ವಿವಿಧ ದೃಷ್ಟಿಯೊಳಾನು ವಿವಿಧ ನಿಲವಿನೊಳದನು
ನೋಡಿ ನಲಿವಾನಂದವಿರಲಿ ನನಗೆ.

## ಬೇಡಿಕೆ

ರಭಸದುದ್ವೇಗದಲಿ ಜಗದ ಕಣ್ಣನು ಸೆಳೆವ
ದಭೆದಭೆಯವೋಲೆನ್ನ ಬಗೆ ಹಾರದಿರಲಿ.
ಕಿರುವಳ್ಳವೊಂದರಲಿ ಮಡುವಾಗಿ ನಿಂದಿರುವ
ತಿಳಿನೀರಿನಂದದಲಿ ನನ್ನ ಮನವಿರಲಿ.

ಶರ್ತವರ್ತಿ ತೇಜದಿಂದುರಿವ ವಿದ್ಯುದ್ದೀಪ–
ದಸವಮಾನ ಕಾಂತಿವೊಲು ಬಗೆಯುರಿಯದಿರಲಿ.
ಅಲ್ಪಾಲ್ಪ ಭಾಸದಲಿ ಬೆಳಗಿ ಮರೆಯಾಗುತಿಹ
ಮಿಣಕು ಹುಳುಗಳ ವೋಲು ಬಗೆ ಹೊಳೆಯುತಿರಲಿ.

ಹತ್ತು ಸಾವಿರ ಮಂದಿ ನೆರೆವ ಸಂತೆಯ ಮುಂದೆ
ಬಿತ್ತರಿಪ ಕಾರ್ಯವೆನಗಿನಿಸಿಲ್ಲದಿರಲಿ.
ಎಲ್ಲ ಲೌಕಿಕವುಳಿದು ಏಕಾಂತದಲಿ ಕುಳಿತು
ಹೊತ್ತಗೆಯನೋದುತಿಹ ಸೌಖ್ಯವೆನಗಿರಲಿ.

# ಕರೆ

ಎರಗದಿರು ಸಿಡಿಲಂತೆ ಸುಳಿಯದಿರು ಮಿಂಚಂತೆ
ಮುರಿದು ನೆಲಕೆಸೆಯದಿರು ಬಿರುಗಾಳಿಯಂತೆ.
ಇರುಳಿನಲಿ ಸುಳಿದು ಬಹ ನೆರಳಿನಂದದಿ ಕವಿದು
ಮೆಲು ನಡೆಯಿನಡಿಯಿಟ್ಟು ಕದ್ದು ಬಾ ಸಾವೆ.

ತೈಲವಿಂಗಿದ ದೀಪದಂತೆ ಮಸು ಮುಸುಕಾಗಿ
ತನಗೆ ತಾನೇ ನಂದಿ ಬೆಳಕಳಿಯುವಂದು
ಊರ ಉರಿಗೆಂತಂತೆ ಕೋಲಾಹಲಂ ಗೈದು
ರಾಚುವರೆ ತಣ್ಣೀರ ಮೊಗೆಮೊಗೆದು ತಂದು.

ತೊಟ್ಟು ಕಳಚಿದ ಕುಸುಮದಂತೆ ಜೀವನವಿಂದು
ತನಗೆ ತಾನೇ ಬಾಡಿ ಕೆಳಗುರುಳುವಂದು
ಪೇರಾಲಕೆಂತಂತೆ ಪೆರ್ಗೊಡಲಿಗಳ ತಂದು
ಕಡಿವೊಂದು ಸನ್ನಾಹವೇತಕೆಲೆ ತಂದೆ.

ಬಿರುನುಡಿಯನಾಡದಿರು ಬಿರುನೋಟವೆಸೆಯದಿರು
ಕಣ್ಣಸನ್ನೆಯ ಮಾಡು ಪಿಸುಮಾತನಾಡು.
ನೋಡಿದೊಡನೆಯೆ ಬರುವೆ ನುಡಿಸಿದೊಡನೈತರುವೆ
ತಡಮಾಡೆನರ ಘಳಿಗೆ ನಿನ್ನೊಡನೆ ತೆರಳೆ.

ಕುದಿವೆದೆಗೆ ತಣುಪಿತ್ತು ಮನಕೆ ಶಾಂತಿಯನಿತ್ತು
ಜಗದ ಜಂಜಡಗಳಿಗೆ ಬೆಂಗೋಲನೆತ್ತಿ
ನೂರಾರು ಕೋಟಲೆಗಳುರಿಯ ದಾವಾನಲಕೆ
ಶೀತಳ ಸುಧೋದಕವನೆರೆಯೆ ಬಾ ಸಾವೆ.

ಹಳೆಯ ಸೆರೆ ಹರಿದು ಹೊಸ ಬಂಧವ್ಯೈತರುವಂದು
ಹಳೆಯ ಮುಕ್ತಿಯ ಅರಕೆ ಪೂರೈಸುವಂದು
ಹಳೆಬೆಳಕು ನಂದಿ ಹೊಸ ಬೆಳಕು ಬಳಿ ಬರುವಂದು
ನಿನ್ನೊಡನೆ ಬರದಿಹೆನೆ ಹೇ ಮುಕ್ತಿ ಬಂಧು

# ಭರವಸೆ

ಭೀಕರದ ಕತ್ತಲೆಯ ತುಮುಲ ರೋದನದುಲಿಯ
    ಮೀರಿ ಮೇಲೇಳುವುದು ಉಷೆಯ ಗಾನ.
ಕುಳಿರ ಮಾಗಿಯ ದಿನದ ಕೊರೆವ ಮಂಜಿನ ತೆರೆಯ
    ತೂರಿ ಮುಂಬರಿಯುವುದು ಅರುಣ ಕಿರಣ.
ಪಾಚಿ ತುಂಬಿದ ಕೊಳಕು ಕೆರೆಯ ನೀರಿನ ಮೇಲೆ
    ಕಣ್ದೆರೆಯಲಣಿಗೈವುದಲ್ಲಿ ಕಮಲ.
ಬೆಟ್ಟ ಕಣಿವೆಯ ಕಳೆದು ಗುಡ್ಡಗಾಡನು ಹಾದು
    ಕಡೆಗೆ ಹೊಳೆ ಸೇರುವುದು ಹಿರಿಯ ಕಡಲ.
ಆವ ಮಾಯೆಗೆ ಸಿಲುಕಿ ನೊಂದು ನರಳಿದರೇನು
    ಜೀವ ಸೇರುವುದಂತೆ ಪರಮನಡಿಯ.

# ಗಗನ ಚುಕ್ಕಿ

ಸಂಜೆಗೆಂಪಿನೋಕುಳಿಯುಲಿ
ರವಿಯು ಮುಳುಗಿರೆ
ಬೈಗುಗತ್ತಲಿಳಿದು ತಿರೆಯು
ಕವಿಯ ಬಂದಿರೆ
ಗಗನದಂಗಳದಲಿ ಚುಕ್ಕಿ
ದೀಪ ಹಚ್ಚಿತು.
ಮಿನುಮಿನುಗುತೆ ಕಾಂತಿದೋರೆ
ಬೆಳಕು ಹೆಚ್ಚಿತು.
ವಿಶ್ವವ್ಯಾಪಿ ತಮದ ಮುಂದ
ತನ್ನ ದೀಪವೆ!
ತನ್ನ ದೀಪವೊಂದರಿಂದೆ
ಕತ್ತಲಳಿವುದೆ!
ಎನುವ ಶಂಕೆ ಚುಕ್ಕಿಗೇಕೆ
ಏಕೆ ಹೆದರಿಕೆ?
ಬೆಳಗಲೆಂದೆ ಹುಟ್ಟಿದಂದು
ಬೆಳಗದಿರುವುದೆ?
ಕೋಟಿ ಚುಕ್ಕಿಗಳಲಿ ತನ್ನ—
ದೊಂದು ಬೆಳಕಿರೆ
ಗಗನ ಚುಕ್ಕಿ ತಾನೆ ಧನ್ಯ-
ಳೆಂದು ಬೆಳಗದೆ!
ಲೋಕವದನು ನೋಡುತೇ—
ನುಪೇಕ್ಷೆಗೈವುದೆ!
ಚುಕ್ಕಿ ಆದರ ಮೆಚ್ಚಿಗೇನ-
ಪೇಕ್ಷೆಗೈವುದೆ!

# ರಾಗಿಣಿ

## ಕೆಲವು ಅಭಿಪ್ರಾಯಗಳು

ನೀನೂದುತಿರುವ ಈ ಸುಳಿದಳಿರೆಲೆಯ ಪೀಪಿ,
ಓ ಮಲೆಯಣುಗದಮ್ಮ, ಮೆಚ್ಚಿನಗೆ; ನಿನಗಾಗಿ
ಮೇಣಾ ಮಲೆಯ ನೆನಹಿಗಾಗಿ.

*　　　　*　　　　*

ಸಂಗಿಯಾಗಲಿ ನಿನ್ನ ಪೀಪಿ ಕಾಜಾಣ, ಗಿಳಿ,
ಕಾಮಳ್ಳಿ, ತೇನೆ, ಕೋಗಿಲೆ, ಹೊರಸು, ಪಿಕಳಾರ
ಮೊದಲಪ್ಪ ಪೆಸರಾಂತ ಮತ್ತೆ ಪೆಸರರಿಯದಿಹ
ಮಲೆವಕ್ಕಿಗಳಿಗೆ. ವೇದಿಕೆಯಕ್ಕೆ ನಿನ್ನುಲಿಯ
ಕಲ್ಪನಾಸುಂದರಿಯ ಲಲಿತಲಾಸ್ಯದ ಲಯಕೆ
ತುಂಗ ಭದ್ರಾಸಂಗಿ ನಿತ್ಯಸುಂದರ ನಿಬಿಡ
ವರ್ಣಾರ್ಣವಾರಣ್ಯಮಯ ರುಂದ್ರ ಸಹ್ಯಾದ್ರಿ:
ಯಾರು ಸುಖಿಸಲಿ, ಬಿಡಲಿ; ಎದೆಯ ಹಿಗ್ಗಿಗೆ ಕೊರಳ
ಉಲಿಯ ಹೆಗ್ಗುರುತಾಗಿ ಬುಗ್ಗೆ ಚಿಮ್ಮಲಿ ಇಂಚರಂ!

—ಕೆ. ವಿ. ಪುಟ್ಟಪ್ಪ
(ಮುನ್ನುಡಿಯಿಂದ)

'Ragini' is a collection, the author's first, of some thirty pieces and reflects the delight of a young mind in the world of sensuous beauty stretching all about him. Bird, flower, wind, water, love and moonlight charm him; and some fine moments and pictures are captured in song and verse....

—The Hindu.

ಭಾವ–ಅನುಭವಗಳ ಅನುಭಾವದಿಂದುಂಟಾದ ರಸದೊರತೆಯ ಬುಗ್ಗೆ 'ರಾಗಿಣಿ'

—ಪ್ರಬುದ್ಧ ಕರ್ಣಾಟಕ

ಇವರ ಒಳ್ಳೆಯ ಭಾವಗೀತೆಗಳಲ್ಲಿ ಕಾಣುತ್ತಿರುವ ಅನ್ಯೋಕ್ತಿ ರೂಪಕಗಳ ವಿಲಾಸವು ಔಚಿತ್ಯಪೂರ್ಣವಾದುದಾಗಿದೆ. ಶಬ್ದದ ನಾದ-ನೃತ್ಯಗಳೂ ಸೊಗಸಾಗಿವೆ. ನಿಡುಗವಿತೆಗಳಾದ 'ದೇವರಾಯನ ದುರ್ಗ' 'ವಿಜಯನಗರದ ಗಿಣಿ' ಎಂಬುವುಗಳಲ್ಲಿ ದೇಶಾಭಿಮಾನಮೂಲಕವಾದ ಉತ್ಸಾಹ–ಕರುಣೆಗಳು ಮೊಗದೋರುತ್ತಲಿದ್ದರೆ 'ಕಾಜಾಣ' ಎಂಬುದರಲ್ಲಿ ಮಲೆನಾಡಿನ ಸೌಂದರ್ಯ ದರ್ಶನದ ಉತ್ಕಟತೆ ತಲೆಯಿಕ್ಕುತ್ತಿದೆ.

—ಜಯಂತಿ

ಕೊನೆಯಲ್ಲಿ ಬರುವ ಕಥನ ಕವಿತೆಗಳಲ್ಲಿ 'ಮಾಚಯ್ಯ' ಒಂದು ಉತ್ತಮ ಕವಿತೆ. ಇದೊಂದು ಅನುವಾದವಾದರೂ ಸ್ವತಂತ್ರ ಕವಿತೆಯ ತೇಜಸ್ಸು ಓಜಸ್ಸುಗಳಿವೆ. ಮೂಲದ ಒಲವು ನಲಿವುಗಳು ನೋವು ಕಾವುಗಳು ಅಚ್ಚಳಿಯದೆ ಇಲ್ಲಿ ಮೂಡಿ ನಿಂತಿವೆ.

—ಜಯಕರ್ಣಾಟಕ

# ಜಹನಾರ

## ಕೆಲವು ಅಭಿಪ್ರಾಯಗಳು

ಈ ಕವಿತೆಯಲ್ಲಿಯ ಕಲ್ಪನಾಶಕ್ತಿ ಮೆಚ್ಚುವಂಥದು, ಆಗಾಗ ಅದು ಮೇಲ್ಮಟ್ಟಕ್ಕೆ ಏರುವುದು. ಅನೇಕ ಕಡೆಗೆ ಅದು ಒಂದು ಚಿಕ್ಕ ಇಲ್ಲವೆ ದೊಡ್ಡ ಉಪಮೆಯಾಗಿದ್ದರೆ ಒಮ್ಮೊಮ್ಮೆ ಉಪಮಾವಳಿಯಾಗಿ ರೂಪಕವಾಗಿ ಹಬ್ಬಿದೆ. ವರ್ಣನೆಗಳಲ್ಲಿ ಸೃಷ್ಟಿನಿರೀಕ್ಷಣೆಯ ನೋಟವಿದೆ, ಸೌಂದರ್ಯಮುಗ್ಧವಾದ ಕವಿಹೃದಯವಿದೆ, ಬಿಡಿಬಿಡಿಸಿ ಬಣ್ಣಿಸುವ ಕೈವಾಡವಿದೆ. ಸರಳರಗಳೆಯ ರೂಪವು ಕವಿಯ ಸಾವಧಾನದ ಅಭಿವ್ಯಕ್ತಿಗೆ ಎಲ್ಲ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ರಚನೆಯ ದೃಷ್ಟಿಯಿಂದ ನೋಡಿದರೆ ಶ್ರೀನಿವಾಸರ ಸರಳ ಸುಂದರಶೈಲಿಯೂ ಪುಟ್ಟಪ್ಪನವರ ಪ್ರೌಢತರವ್ಯಾರೀತಿಯೂ ಈ ಕೃತಿಯಲ್ಲಿ ಒಂದಾಗಿವೆ.

—ರಂ. ಶ್ರೀ. ಮುಗಳಿ (ಮುನ್ನುಡಿಯಿಂದ)

'ಜಹನಾರ' ಒಂದು ಕಥನ ಕವನ. ಇತಿಹಾಸದಲ್ಲಿ ಸುಳಿದುಹೋದ ಒಂದು ಹೆಣ್ಣಿನ ಕತೆ ಇದರ ವಸ್ತು. ಇಲ್ಲಿ ಕಾಣುವುದು ಕಾವ್ಯದ ಕುಲುಮೆಯಲ್ಲಿ ಪುಟಗೊಂಡು ಆ ಹೆಣ್ಣು ಮರುವೈ ತಳೆದು ನಿಲ್ಲುವ ರೀತಿ; ಆ ಬಾಳಿನ ಏಳು ಬೀಳುಗಳ ಬಿಡಿಬಿಡಿಯಾದ, ಬಣ್ಣ ಬಣ್ಣವಾದ, ರಾಗೋಜ್ವಲವಾದ ರೂಪಣ: ಶ್ರೀ ಪರಮೇಶ್ವರ ಭಟ್ಟರ ಕಳಿತಿರುವ ಕಲ್ಪನೆ, ನಯವಾದ ನುಡಿಕಟ್ಟು; ಕೌಶಲದ ಕೈವಾಡ.

— ಕನ್ನಡನುಡಿ

# ಮೇಘದೂತ

### ಕೆಲವು ಅಭಿಪ್ರಾಯಗಳು

ಶ್ರೀ ಪರಮೇಶ್ವರಭಟ್ಟರ ಮೇಘದೂತವು ಮೂಲಕಾವ್ಯದ ಭಾಷಾಂತರ. ಕವಿ ಕಾಳಿದಾಸನನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಡುವ ಅವರ ಧ್ಯೇಯ ಅವರ ಕೃತಿಯಿಂದ ಸಾಧಿಸಿದೆ. ಇದು ಕನ್ನಡದಲ್ಲಿಯು ಒಂದು ಉತ್ತಮ ಕೃತಿ.

— ಕರ್ಮವೀರ

ಮೂಲ ಗ್ರಂಥದಲ್ಲಿನಂತೆಯೇ ಇಲ್ಲೂ 'ಪೂರ್ವಮೇಘ–ಉತ್ತರಮೇಘ' ವೆಂಬೆರಡು ಭಾಗಗಳಿದ್ದು ಕ್ರಮವಾಗಿ ೬೭ ಮತ್ತು ೫೫ ರಗಳೆಯ ಅಷ್ಟಪದಿಗಳಲ್ಲಿ, ಭಾವಗರ್ಭಿತ ಪದಸರಣಿಯಲ್ಲಿ, ಮಹಾಕವಿಯ ಮೇಘ ಸಂದೇಶ ಕಾವ್ಯದ ಕಥಾವಸ್ತುವು ಸುಲಲಿತವಾಗಿ ನಿರೂಪಿಸಲಾಗಿದೆ.

— ಸುಬೋಧ

—X—

## ಶ್ರೀ ಪರಮೇಶ್ವರ ಭಟ್ಟರ ಇತರ ಕೃತಿಗಳು

| | | |
|---|---|---|
| ರಾಗಿಣಿ (ಕವನ ಸಂಗ್ರಹ) | .... | ೦ — ೮ — ೦ |
| ಜಹನಾರ (ಕಥನ ಕವನ) | .... | ೦—೧೦—೦ |
| ಮೇಘದೂತ (ಖಂಡಕಾವ್ಯ) | .... | ೦—೧೦—೦ |
| ಅಕ್ಕಮಹಾದೇವಿ (ಜೀವನ ಚರಿತ್ರೆ ಮತ್ತು ವಚನ ವಿಮರ್ಶೆ) | | ೦ — ೩ — ೦ |

**ಈ ಎಲ್ಲ ಕೃತಿಗಳೂ**
ಮಿತ್ರ ಮತ್ತು ಕಂಪೆನಿ,—ಪುಸ್ತಕ ವ್ಯಾಪಾರಿಗಳು,
**ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್ ಮೈಸೂರು,**
**ಸಾಹಿತ್ಯ ಮಂದಿರ, ಮೈಸೂರು, ಕರ್ಣಾಟಕ ಸಂಘ, ಶಿವಮೊಗ್ಗ,**
**ಇವರಲ್ಲಿ ದೊರೆಯುತ್ತವೆ.**

## ಬರಲಿರುವ ಕೃತಿಗಳು

**ಋತುಸಂಹಾರ:** (ಕಾಳಿದಾಸನ ಕವಿಯ ಸಂಸ್ಕೃತ ಖಂಡಕಾವ್ಯದ ಕನ್ನಡ ಭಾಷಾಂತರ. ಸರಳವೂ ಸುಂದರವೂ ಆದ ಲಘು ಭಾವಗೀತಗಳ ಸಂಕಲನ.)

**ಬಸವರಾಜಮಾರ್ಗ:** (ಮಹಾತ್ಮ ಬಸವೇಶ್ವರರ ಜೀವನ ವೃತ್ತಾಂತ, ಆಧ್ಯಾತ್ಮಿಕ ಚಿತ್ತವೃತ್ತಿ, ಉಪದೇಶ, ವಚನವಾಙ್ಮಯ, ಮುಂತಾದ ವಿಷಯಗಳನ್ನು ಸುದೀರ್ಘವಾಗಿ ವಿವರಿಸಿ ಬರೆದ ಗ್ರಂಥ)

**ಕವಿ-ಕಾವ್ಯ ವಿಚಾರ:** (ಸಾಹಿತ್ಯಕ್ಕೆ ಸಂಬಂಧಿಸಿದ ಹಲವು ನಿಬಂಧಗಳ ಸಂಗ್ರಹ.)